# ಕಿವುಡುತನದ ತೊಂದರೆಗಳು

ಭಾಗ - 2 ಘಟಕ - 2

ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ



# ಕಿವುಡುತನದ ತೊಂದರೆಗಳು










ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ಪರಿಕಲ್ಪನೆ ಮತ್ತು ಪ್ರಧಾನ ಸಂಪಾದಕರು : **ಪ್ರೊ. ಎಂ. ಜಯರಾಮ್**

ಪ್ರಕಾಶಕರು: **ಪ್ರೊ. ಎಂ. ಜಯರಾಮ್**
ನಿರ್ದೇಶಕರು
ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ,
ಮೈಸೂರು 6

ಬರವಣಿಗೆ ಹಾಗೂ ಸಂಕಲನ: **ಪಿ. ಮಂಜುಳ**
**ಡಾ. ಎಂ. ಜಯರಾಮ್**

ಪುಸ್ತಕ ವಿನ್ಯಾಸ ಮತ್ತು ತಾಂತ್ರಿಕ ಸಲಹೆ: **ಎಂ. ಜಿ. ಮಂಜುಸ್ವಾಮಿ**
**ಟೀನಾ ಸಹೆಲಾ**

ಚಿತ್ರಗಳು: **ಜಿ. ವಿ. ಗಣೇಶಯ್ಯ**

ಮುಖಪುಟ: **ಎಂ. ಜಿ. ಮಂಜುಸ್ವಾಮಿ**

ಬೆಲೆ: ರೂ. 50/-

ಪ್ರಕಟಣೆ: 2006

ಬೆಳವಣಿಗೆ ನ್ಯೂನತೆಗಳುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ

ಭಾಗ–2 ಘಟಕ–2

# ಕಿವುಡುತನದ ತೊಂದರೆಗಳು




ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು–6

# ನಮ್ಮ ಧ್ಯೇಯ

1966ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸ್ವಾಯತ್ತ ಸಂಸ್ಥೆಯಾಗಿ ಹುಟ್ಟು ಪಡೆದ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್ ಶ್ರವಣ ನ್ಯೂನತೆಗಳುಳ್ಳ ಜನರಿಗಾಗಿ ಸೇವೆ ಸಲ್ಲಿಸುತ್ತಿದೆ. ಚಿಕಿತ್ಸೆ, ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ.

ನಮ್ಮ ದೇಶದ ಶೇ.10 ರಷ್ಟು ಮಕ್ಕಳು ಒಂದಲ್ಲಾ ಒಂದು ರೀತಿಯ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳಿಗೆ ತುತ್ತಾಗಿದ್ದಾರೆ ಎಂದು ಅಂಕಿ-ಅಂಶಗಳಿಂದ ತಿಳಿದು ಬರುತ್ತದೆ. ಇಂತಹ ಮಕ್ಕಳನ್ನು ಶೀಘ್ರವಾಗಿ ಗುರುತಿಸಿ, ಭವಿಷ್ಯದಲ್ಲಿ ಅವರಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗುವಂತೆ ಚಿಕಿತ್ಸೆ ಹಾಗೂ ತರಬೇತಿ ನೀಡುವುದು ಅತಿ ಅವಶ್ಯಕ. ಆದರೆ ಈ ರೀತಿಯ ಚಿಕಿತ್ಸೆ ಮತ್ತು ತರಬೇತಿ ನೀಡುವ ತಜ್ಞರ ಸಂಖ್ಯೆ ಬಹಳ ಕಡಿಮೆ ಇರುವುದು ವಾಸ್ತವ ಸಂಗತಿ. ಇಂತಹ ವಾಕ್-ಶ್ರವಣ ತಜ್ಞರ ಸೇವೆ ಎಲ್ಲಿ ಬೇಕೋ ಅಲ್ಲಿ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಕೆಲಸ ಮಾಡಲು ಮುಂದೆ ಬರುವವರೇ ಇಲ್ಲ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ತೊಂದರೆ ಇರುವ ಲಕ್ಷಾಂತರ ಜನರನ್ನು ನಮ್ಮ ಸಲಹೆ ಸೂಚನೆ ಸೇವೆಗಳನ್ನು ಪಡೆಯಲು ನಗರ ಪ್ರದೇಶಗಳಲ್ಲಿ ಇರುವಂತಹ ನಮ್ಮ ಸಂಸ್ಥೆಗಳಿಗೆ ಬನ್ನಿ ಎಂದು ಕರೆಯುವುದು ಸಮಂಜಸವಲ್ಲ. ಆದುದರಿಂದ ಮಾತು-ಕೇಳುವಿಕೆಯ ತೊಂದರೆಗಳಿರುವ ಜನರ ಸುತ್ತಮುತ್ತ ಇರುವ ಸಮುದಾಯದ ಒಂದು ವರ್ಗದ ಜನರನ್ನು ಆರಿಸಿ ಅವರಿಗೆ ಸೂಕ್ತ ತರಬೇತಿ ನೀಡಿದರೆ, ನಮ್ಮ ಗ್ರಾಮೀಣ ಪ್ರದೇಶದ ಜನರ ಬವಣೆ ಸ್ವಲ್ಪವಾದರೂ ನೀಗಬಹುದೆಂದು ನಮ್ಮ ಅನಿಸಿಕೆ.

ಈ ದಿಕ್ಕಿನಲ್ಲಿ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಪೋಷಕರನ್ನು ಗಮದಲ್ಲಿಟ್ಟುಕೊಂಡು ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ ಒಂದು ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಿದೆ. ಈ ತರಬೇತಿ ಕಾರ್ಯಕ್ರಮವು ಅಂಚೆ ತೆರಪಿನ ಶಿಕ್ಷಣದ ಮೂಲಕ ನಡೆಯುವಂತೆ ಯೋಜಿಸಲಾಗಿದ್ದು, ಸಂವಹನ ನ್ಯೂನತೆಯ ಮಕ್ಕಳ ತರಬೇತಿಯಲ್ಲಿ ಒಂದು ಹೊಸ ಆಯಾಮವನ್ನು ಹುಟ್ಟುಹಾಕಿದೆ. ಶ್ರವಣದೋಷ, ಮಾತು-ಕೇಳುವಿಕೆಯ ದೋಷವಿರುವ 'ಪ್ರತಿಯೊಂದು ಮಗುವಿಗೂ ಈ ಆರೈಕೆ/ಸೇವೆ ತಲುಪುವಂತಾಗಬೇಕು. ಅವರೆಲ್ಲರ ನಾಳೆಯ ಬದುಕು ಹಸನಾಗಬೇಕು' ಎಂಬುದೇ ನಮ್ಮ ಕನಸು ಮತ್ತು ಧ್ಯೇಯ.

ಮಾತು-ಕೇಳುವಿಕೆಯ ನ್ಯೂನತೆಯಿರುವ ಮಕ್ಕಳ ತರಬೇತಿಗಾಗಿ ಪೋಷಕರಿಗೆ ರೂಪಿಸಿರುವ ಈ ಕಾರ್ಯಕ್ರಮವು ಹಲವು ಅಂಶಗಳಲ್ಲಿ ಪೋಷಕರಿಗೆ ತರಬೇತಿಯನ್ನು ನೀಡುತ್ತದೆ. ತೊಂದರೆಗಳ ಗುರುತಿಸುವಿಕೆ, ತಡೆಗಟ್ಟುವಿಕೆ, ನಿರ್ವಹಣೆ, ಇಂತಹ ಮಕ್ಕಳ ತರಬೇತಿ, ಸರ್ಕಾರದಿಂದ ಇಂತಹ ಮಕ್ಕಳಿಗೆ ನೀಡಲಾಗಿರುವ ವಿಶೇಷ ಸೌಲಭ್ಯ-ಸವಲತ್ತು-ಹಕ್ಕುಗಳ ಬಗ್ಗೆ ಮಾಹಿತಿ, ಸರ್ಕಾರದ ಕಾರ್ಯಕ್ರಮಗಳು-ಕಾನೂನುಗಳ ಬಗ್ಗೆ ತಿಳುವಳಿಕೆ, ಇತ್ಯಾದಿ. ಅತಿ ಮುಖ್ಯವಾಗಿ, ಮಾತು-ಕೇಳುವಿಕೆಗೆ ಸಂಬಂಧಪಟ್ಟ ನ್ಯೂನತೆಗಳುಳ್ಳ ಮಕ್ಕಳಿಗೆ ಮನೆಯಲ್ಲೇ ನಡೆಸಬಹುದಾದ ತರಬೇತಿ. ಇದಕ್ಕಾಗಿ ನಾಲ್ಕು ಭಾಗಗಳ ಒಂದು ತರಬೇತಿ ಕಾರ್ಯಕ್ರಮವನ್ನು ಸಂಸ್ಥೆಯು ರೂಪಿಸಿದೆ. ಭಾಗ 1, 3, ಮತ್ತು 4 ಎಲ್ಲರಿಗೂ ಕಡ್ಡಾಯ. ಭಾಗ 2 ರಲ್ಲಿ ನಾಲ್ಕು ವಿಷಯಗಳಿದ್ದು, ಪ್ರತಿಯೊಬ್ಬರೂ ಕಡ್ಡಾಯವಾಗಿ ಎರಡು ವಿಷಯಗಳನ್ನು ಅಭ್ಯಸಿಸಬೇಕು. ಈ ತರಬೇತಿಯ ವಿಶೇಷವೆಂದರೆ ಪೋಷಕರಿಗೆ ತಮ್ಮ ಮಕ್ಕಳಲ್ಲಿರುವ ತೊಂದರೆಯ ಬಗ್ಗೆ ಮಾತ್ರ ಅಲ್ಲ, ಉಳಿದ ತೊಂದರೆಗಳ ಬಗ್ಗೆಯೂ ಅಭ್ಯಾಸ ಮಾಡಲು ಭಾಗ 2 ರಲ್ಲಿ ಅವಕಾಶ-ಪ್ರೋತ್ಸಾಹ ನೀಡಲಾಗುವುದು.

ಪ್ರಸ್ತುತ ಅಂಚೆ ತೆರಪಿನ ಶಿಕ್ಷಣದ ಮೂಲಕ ಕನ್ನಡದಲ್ಲಿ ತರಬೇತಿಯನ್ನು ಆರಂಭಿಸುತ್ತಿದ್ದೇವೆ. ಮುಂದೆ ಇಂಗ್ಲೀಷ್, ಹಿಂದಿ, ಮಲಯಾಳಂ ಮತ್ತು ನಮ್ಮ ದೇಶದ ಇತರ ಮುಖ್ಯ ಭಾಷೆಗಳಲ್ಲೂ ಸಹ ತರಬೇತಿಯನ್ನು ಪ್ರಾರಂಭಿಸುತ್ತೇವೆ. ಈ ತರಬೇತಿ ಎಸ್. ಎಸ್.ಎಲ್.ಸಿ (10 ನೇ ತರಗತಿ)ಯಲ್ಲಿ ಉತ್ತೀರ್ಣರಾಗಿರುವ ಎಲ್ಲಾ ಪೋಷಕವರ್ಗದವರಿಗೂ ಲಭ್ಯವಿದೆ.

ಈ ಸರ್ಟಿಫಿಕೇಟ್ ಪಠ್ಯ ಕ್ರಮ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳುಳ್ಳ ಮಕ್ಕಳ ತಂದೆ ತಾಯಿಯರಿಗೆ ವಿಶೇಷವಾಗಿ ರೂಪಿಸಲ್ಪಟ್ಟಿದ್ದರೂ ಕೂಡ, ಹೆಚ್ಚಿನ ಸಂಖ್ಯೆಯಲ್ಲಿ ತಾಯಂದಿರು, ನಮ್ಮ ಸೋದರಿಯರು ಇದರ ಪ್ರಯೋಜನ ಪಡೆಯಲಿ ಎಂದು ನಮ್ಮ ಆಸೆ. ಏಕೆಂದರೆ ಒಂದು ಮಗುವಿನ ಶಿಕ್ಷಣದಲ್ಲಿ, ಪಾಲನೆ-ಪೋಷಣೆಯಲ್ಲಿ, ಬೇಕು-ಬೇಡಗಳನ್ನು ಗುರುತಿಸುವಲ್ಲಿ, ತಾಯಿಯರಿಗೆ ಸರಿಸಮನಾಗಿ ಯಾರೂ ನಿಲ್ಲಲಾರರು. ಒಂದು ಸಂಸಾರದಲ್ಲಿ ಓದು ಬರಹ ಬಲ್ಲ ಒಬ್ಬಳು ಹೆಣ್ಣಿದ್ದರೆ, ಇಡೀ ಸಂಸಾರವೇ ಮುಂದೆ ಬರುತ್ತದೆ ಎಂದು ನಾಣ್ಣುಡಿಯೇ ಇದೆಯಲ್ಲ! ಈ ರೀತಿ ತರಬೇತಿ ಪಡೆದ ಒಬ್ಬ ತಾಯಿ, ತನ್ನ ಮಕ್ಕಳಿಗಷ್ಟೇ ಅಲ್ಲ, ತನ್ನ ಸುತ್ತಮುತ್ತಲಿರುವ ಎಲ್ಲಾ ಮಕ್ಕಳಿಗೂ ದಾರಿದೀಪವಾಗಬಲ್ಲಳು.

ಈ ಭಾಗ ಕಿವುಡುತನದ ತೊಂದರೆಗಳನ್ನು ಕುರಿತದ್ದು. ಕಿವುಡುತನವನ್ನು ಆರಂಭದಲ್ಲೇ ಗುರುತಿಸಲು, ಹಾಗೂ ಅವುಗಳಿಗೆ ತಕ್ಕ ಪರಿಹಾರಮಾರ್ಗಗಳ ಬಗ್ಗೆ ಸಲಹೆ-ಸೂಚನೆ ನೀಡಲು ಈ ಪುಸ್ತಕ ರಚಿಸಲ್ಪಟ್ಟಿದೆ. ಇದರಲ್ಲಿ ಕಿವುಡುತನವಿರುವ ಮಕ್ಕಳಿಗೆ ನೀಡಬಹುದಾದ ತರಬೇತಿ ವಿಧಾನಗಳ ಬಗ್ಗೆ ತಿಳಿಸಲಾಗಿದೆ. ಈ ತೊಂದರೆಗಳಿಗೆ ತುತ್ತಾಗುವ ಮಕ್ಕಳು ಸಾಮಾಜಿಕವಾಗಿ, ಮಾನಸಿಕವಾಗಿ ಹಾಗೂ ವ್ಯಕ್ತಿಗತವಾಗಿ ಆತ್ಮವಿಶ್ವಾಸವನ್ನು ಬೆಳೆಸಿಕೊಂಡು ಯಶಸ್ವೀ ಜೀವನ ಸಾಗಿಸುವಂತಾಗಬೇಕೆಂಬುದು ನಮ್ಮ ಆಶಯ. ಈ ದಿಸೆಯಲ್ಲಿ ನಮ್ಮ ಈ ಪುಸ್ತಕವು ಪೋಷಕರಿಗೆ, ಉಪಾಧ್ಯಾಯರಿಗೆ ಉತ್ತಮ ಮಾರ್ಗಸೂಚಿ ಆಗುತ್ತದೆ ಎನ್ನುವುದು ನಮ್ಮ ನಂಬಿಕೆ.

ಈ ಪಠ್ಯಕ್ರಮವನ್ನು ರೂಪಿಸುವಲ್ಲಿ, ಬರೆಯುವಲ್ಲಿ ನಾವೆಷ್ಟು ಸಫಲರಾಗಿದ್ದೇವೆ ಎನ್ನುವುದರ ಬಗ್ಗೆ ನಿಮ್ಮ ಅನಿಸಿಕೆ ನಮಗೆ ಬಹಳ ಅವಶ್ಯ. ದಯವಿಟ್ಟು ಈ ಪಠ್ಯದ ನಿರೂಪಣೆ, ತಾಂತ್ರಿಕತೆ, ಸರಳತೆ, ಸಂಕೀರ್ಣತೆ ಮತ್ತು ನ್ಯೂನತೆಗಳ ಬಗ್ಗೆ ಬರೆದು ತಿಳಿಸಿ. ನಿಮ್ಮ ಅವಶ್ಯಕತೆಗಳನ್ನು ಪೂರೈಸಲು, ನಿಮ್ಮ ಅನಿಸಿಕೆಗಳನ್ನು ಗೌರವಿಸಲು, ನಿಮ್ಮ ಆಶಯಗಳನ್ನು ಮುಟ್ಟಲು ಮುಂದಿನ ಪ್ರಕಟಣೆಗಳಲ್ಲಿ ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ. ನಮ್ಮ ಸಂಸ್ಥೆಯ ಆಸೆ-ಆಕಾಂಕ್ಷೆಗಳನ್ನು ಸಾಕಾರಗೊಳಿಸಲು ನಿಮ್ಮ ಸಹಕಾರ ಅತ್ಯಗತ್ಯ.

ಈ ತರಬೇತಿಯ ಪಠ್ಯ ವಿಷಯಗಳನ್ನು ರೂಪಿಸುವಲ್ಲಿ ವಿಷಯ ತಜ್ಞರು, ವಿಶೇಷ ತಜ್ಞರು ಹಾಗೂ ಸಂಪಾದಕ ಮಂಡಲಿಯ ಸದಸ್ಯರು ಹಗಲಿರುಳು ಶ್ರಮಿಸಿದ್ದಾರೆ. ಯೋಗ್ಯವಾದ ಪಠ್ಯವನ್ನು ರೂಪಿಸಲು ಇವರೆಲ್ಲರೂ ಯಶಸ್ವಿಯಾಗಿದ್ದಾರೆ ಎಂದು ನನ್ನ ಭಾವನೆ. ಇದಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹಾಗೂ ನಮ್ಮ ಸಂಸ್ಥೆಯ ವಿಶೇಷ ಅಭಿನಂದನೆಗಳು.

ಡಾ. ಮ. ಜಯರಾಮ್
ನಿರ್ದೇಶಕರು

# ಪರಿವಿಡಿ

# ಅಧ್ಯಾಯ - 1

## ಕಿವಿ

ಪರಿಮಳ ಆಸ್ಪತ್ರೆಯಿಂದ ಬಿಡುಗಡೆಯಾಗಿ ಮನೆಗೆ ಬಂದಳು, ಪುಟಾಣಿ ತಮ್ಮ ರವಿ ಅಕ್ಕನನ್ನು ಕಂಡು ಖುಷಿಯಿಂದ ಓಡಿಬಂದ. ಅಕ್ಕನಿಲ್ಲದೆ ಅವನಿಗೆ ಮನೆಯಲ್ಲಿ ಬಹಳ ಬೇಸರವಾಗಿತ್ತು. 'ಇನ್ನೆಂದೂ ನಿನ್ನನ್ನು ಬಿಡುವುದಿಲ್ಲ' ಎಂಬಂತೆ ಅವಳನ್ನು ಬಾಚಿ ತಬ್ಬಿದ. ಪರಿಮಳ ಅವನನ್ನು ಎತ್ತಿ ಮುತ್ತಿಕ್ಕಿದಳು.

ಪರಿಮಳಳಿಗೆ ಮಿದುಳು ಜ್ವರ ಆಗಿತ್ತು. ಚಿಕ್ಕಂದಿನಲ್ಲಿ ರೋಗ ನಿರೋಧಕ ಚುಚ್ಚುಮದ್ದು ಕೊಡಿಸುವಲ್ಲಿ ತಂದೆ-ತಾಯಿ ನಿರ್ಲಕ್ಷ್ಯ ತೋರಿದ್ದರು. ಹೀಗಾಗಿ ಅವಳು ಸುಲಭವಾಗಿ ಮಿದುಳು ಜ್ವರಕ್ಕೆ ತುತ್ತಾಗಿದ್ದಳು. ಹದಿನಾರು ದಿನಗಳ ದೀರ್ಘಕಾಲದ ಶುಶ್ರೂಷೆಯ ಬಳಿಕ ಸುಧಾರಿಸಿದ್ದ ಅವಳನ್ನು ಇಂದು ಆಸ್ಪತ್ರೆಯಿಂದ ಮನೆಗೆ ಕರೆತರಲಾಗಿತ್ತು.

ತಂದೆ, ತಾಯಿ ಪರಿಮಳಳನ್ನು ಅವಳ ಪುಟಾಣಿ ತಮ್ಮನೊಂದಿಗೆ ಆಡಲು ಬಿಟ್ಟು, ಒಳಗೆ ಹೋದರು. ಸ್ವಲ್ಪ ಸಮಯದ ನಂತರ ಕಾಲಿಂಗ್ ಬೆಲ್ ಬಾರಿಸಿದ ಶಬ್ದ ಕೇಳಿಸಿತು. ಹೊರ ಕೋಣೆಯಲ್ಲೇ ಪರಿಮಳ ಇರುವ ಕಾರಣ ಅವಳೇ ಬಾಗಿಲು ತೆಗೆದಾಳು ಎಂದು ತಂದೆ ತಾಯಿ ಸುಮ್ಮನಿದ್ದರು. ಮತ್ತೊಮ್ಮೆ ಬೆಲ್ ಬಾರಿಸಿತು. ಇನ್ನೊಮ್ಮೆ ಬಾರಿಸಿತು 'ಅರೇ! ಇದ್ಯಾಕೆ ಪರಿಮಳ ಬಾಗಿಲು ತೆಗೀತಾ ಇಲ್ಲ!" ಅಡುಗೆ ಕೋಣೆಯಿಂದ ತಾಯಿ ಹೊರಗೆ ಬಂದಳು. ಅಲ್ಲಿ ಕಂಡ ದೃಶ್ಯ ಅವಳಲ್ಲಿ ಆತಂಕ ಮೂಡಿಸಿತು. ಕಾಲಿಂಗ್ ಬೆಲ್ ಬಾರಿಸುತ್ತಲೇ ಇದ್ದರೂ ಪರಿಮಳ ಮಾತ್ರ ಕಿವಿಗೇ ಬೀಳದವಳಂತೆ ಸೋಫಾದಲ್ಲಿ ಕುಳಿತು ಏನೋ ಓದುತ್ತಿದ್ದಳು. ಪುಟಾಣಿ ರವಿ ಅವಳ ಮಡಿಲಲ್ಲಿ ತಲೆ ಇಟ್ಟು, ಹಾಗೇ ನಿದ್ರೆಗೆ ಶರಣಾಗಿದ್ದ.

"ಕಾಲಿಂಗ್ ಬೆಲ್ ಬಾರಿಸ್ತಿರೋದು ಕೇಳಿಸ್ತಿಲ್ವೇನೆ?" ಎಂದು ತಾಯಿ ಪ್ರಶ್ನಿಸಿದಳು ಪರಿಮಳ ತಲೆ ಎತ್ತಲಿಲ್ಲ.

ಪರಿಮಳ ತಾನು ಓದುತ್ತಿದ್ದ ಪುಸ್ತಕದ ಮೇಲಿನ ತನ್ಮಯತೆಯಿಂದಾಗಿ ಕಾಲಿಂಗ್ ಬೆಲ್ ಶಬ್ದವನ್ನು ಆಲಿಸಲಿಲ್ಲ ಎಂದು ನಾವು ಅಂದುಕೊಳ್ಳಬಹುದು. ಆದರೆ, ಪರಿಮಳಳಿಗೆ ಆ ಸದ್ದು ಕೇಳಿಯೇ ಇರಲಿಲ್ಲ. ಅಂದರೆ, ಪರಿಮಳಳ ಕಿವಿ ತನ್ನ ಕೇಳುವ ಶಕ್ತಿಯನ್ನು ಕಳೆದುಕೊಂಡಿತ್ತು.

ಇಂತಹ ಸನ್ನಿವೇಶ ನಮ್ಮಲ್ಲಿಯೂ ಯಾರಿಗಾದರೂ ಎದುರಾಗಬಹುದಲ್ಲವೇ? ಶ್ರವಣ ಶಕ್ತಿ ಕುಂಠಿತಗೊಳ್ಳಲು ಅಥವಾ ಪೂರ್ಣ ನಾಶವಾಗಲು ಇನ್ನೂ ಹಲವಾರು ಕಾರಣಗಳಿರಬಹುದು. ಈ ಕಾರಣಗಳು ಯಾವುವು? ಹೀಗಾಗದಂತೆ ತಡೆಗಟ್ಟಲು ಏನು ಮಾಡಬಹುದು? ಕಿವಿ ಕೇಳಿಸದೇ ಹೋದಾಗ ಆ ಮಗುವಿನ ಆರೈಕೆ ಮಾಡಲು ನಾವೇನು ಮಾಡಬೇಕು? ಈ ಎಲ್ಲ ಅಂಶಗಳನ್ನು ಮುಂದೆ ಹಂತಹಂತವಾಗಿ ಅಧ್ಯಯನ ಮಾಡೋಣ.

ಕಿವಿಯ ತೊಂದರೆಯು ಹುಟ್ಟಿನಿಂದಲೂ ಕಂಡು ಬರಬಹುದಾದ ತೊಂದರೆಗಳಲ್ಲಿ ಒಂದು. National Sample Survey Organization 2002ರ ಒಂದು ಸಮೀಕ್ಷೆಯ ಪ್ರಕಾರ ನಮ್ಮ ದೇಶದಲ್ಲಿ ಪ್ರತಿ ಒಂದು ಲಕ್ಷ ಜನರಲ್ಲಿ 291 ಜನರಿಗೆ ಹುಟ್ಟಿನಿಂದಲೂ ಶ್ರವಣ ಶಕ್ತಿಯ ತೊಂದರೆ ಇದೆ. ಇದರ ಪ್ರಮಾಣ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು.

ಕಿವುಡು, ಅದರಲ್ಲೂ ಹುಟ್ಟು ಕಿವುಡುತನ, ಮಗುವಿನ ಮೇಲಷ್ಟೇ ಅಲ್ಲ, ಅದರ ಕುಟುಂಬದವರ ಮೇಲೂ ಪರಿಣಾಮ ಬೀರುತ್ತದೆ. ಕಿವುಡುತನವನ್ನು ಆದಷ್ಟು ಬೇಗ ಗುರುತಿಸಿ ಸರಿಯಾದ ಚಿಕಿತ್ಸೆ ಕೊಡಿಸದಿದ್ದಲ್ಲಿ, ಅಂತಹ ಮಗು ಮಾತು ಹಾಗೂ ಭಾಷೆಯ, ಭಾವನಾತ್ಮಕ, ಮಾನಸಿಕ ಹಾಗೂ ಶೈಕ್ಷಣಿಕ ಬೆಳವಣಿಗೆಯಲ್ಲಿ ಹಿಂದುಳಿಯುತ್ತದೆ.

ಕಿವುಡುತನ ಇರುವ ಮಗುವನ್ನು ಹುಟ್ಟಿದ ಆರು ತಿಂಗಳಿಗೆ ಮುನ್ನವೇ ಗುರುತಿಸಿ ಸರಿಯಾದ ಚಿಕಿತ್ಸೆ-ತರಬೇತಿ ನೀಡಿದಲ್ಲಿ ಅದು ನಮ್ಮ ನಿಮ್ಮಂತೆಯೇ ಮಾತು ಕಲಿಯುತ್ತದೆ. ಅಂತಹ ಮಗು ಬೇರೆ ಮಕ್ಕಳಂತೆ ವಿದ್ಯಾಭ್ಯಾಸ ಮಾಡಬಹುದು. ಕಿವುಡುತನವಿರುವ ಮಗುವನ್ನು ನೋಡಿಕೊಳ್ಳುವ ನಿಮಗೆ ಕಿವುಡುತನ, ಕಿವಿಯ ಇತರೆ ತೊಂದರೆಗಳು, ಕಿವುಡುತನದಿಂದಾಗುವ ಪರಿಣಾಮಗಳನ್ನು ದೂರಗೊಳಿಸುವ ವಿಧಾನಗಳು, ಶ್ರವಣ ಯಂತ್ರದ ಬಳಕೆ ಹಾಗೂ ಶ್ರವಣ ದೋಷವುಳ್ಳ ಮಗುವಿನ ವಿದ್ಯಾಭ್ಯಾಸದ ಬಗ್ಗೆ ಸಂದೇಹಗಳು ಕೊರೆಯುತ್ತಿರುವುದು ಸಹಜ. ಇವೆಲ್ಲಾ ವಿಚಾರಗಳನ್ನು ಈಗ ತಿಳಿದುಕೊಳ್ಳೋಣ.

## ನಮ್ಮ ಕಿವಿಯ ರಚನೆ

ಕಿವಿಯನ್ನು ಮುಖ್ಯವಾಗಿ ಮೂರುಭಾಗಗಳಾಗಿ ವಿಂಗಡಿಸಲಾಗಿದೆ. ಹೊರಕಿವಿ. ಮಧ್ಯ ಕಿವಿ. ಒಳಕಿವಿ. ಇದನ್ನು ಈ ಕೆಳಗಿನ ಚಿತ್ರದಲ್ಲಿ ಕಾಣಬಹುದು.




ಹೊರಕಿವಿ: ಇದು ಕಿವಿಯಾಲೆ ಮತ್ತು ಹೊರಗಿವಿ ನಾಳದಿಂದ ಕೂಡಿರುತ್ತದೆ. ಕಿವಿಯಾಲೆಯು ಹೊರಗಡೆಯಿಂದ ಕಂಡು ಬರುವ ಭಾಗ. ಇದು ಮೆಲ್ಲಲುಬಿನಿಂದ ಆಗಿದ್ದು ಚರ್ಮಕ್ಕೆ ಸೇರಿಕೊಂಡಿದೆ.

ಹೊರಗಿವಿನಾಳವು ಬಗ್ಗಿರುವ ಕೊಳವೆಯ ಹಾಗಿದೆ. ಈ ನಾಳದ ರಚನೆಯು ಮೆಲ್ಲೆಲುಬು ಮತ್ತು ಮೂಳೆಯ ಭಾಗಗಳಿಂದ ಆಗಿದ್ದು, ಗುಗ್ಗೆಯನ್ನು ಉತ್ಪಾದಿಸುವ ಗ್ರಂಥಿಗಳು ಮತ್ತು ರೋಮ ಕೂಪಗಳನ್ನು ಒಳಗೊಂಡಿದೆ. ಕಿವಿಯಾಲೆಯು ಶಬ್ದ ತರಂಗಗಳನ್ನು ಸಂಗ್ರಹಿಸಿ, ಮಧ್ಯ ಕಿವಿಗೆ ತಲುಪಿಸಲು ಸಹಾಯ ಮಾಡುತ್ತದೆ. ಶಬ್ದ ಬಂದ ದಿಕ್ಕನ್ನು ಕಂಡು ಹಿಡಿಯುವುದರಲ್ಲೂ ಇದರ ಪಾತ್ರವಿದೆ.

ಹೊರಗಿವಿನಾಳದ ಒಳ ತುದಿಯಲ್ಲಿ ಕಿವಿ ತಮಟೆ ಇದೆ. ಇದು ಮೂರು ಪದರಗಳನ್ನು ಹೊಂದಿದೆ. ಕಿವಿ ತಮಟೆಯ ಅಂಚಿನಲ್ಲಿರುವ ಉಂಗುರಾಕಾರದ ಮೂಳೆಯು ಇದನ್ನು ಹಿಡಿದಿದೆ.

ಇದು ಆರು ಗೋಡೆಗಳಿಂದ ಕೂಡಿದ ಗಾಳಿ ತುಂಬಿದ ಕೋಶ. ಹೊರಗೋಡೆಯ ಹೆಚ್ಚು ಭಾಗವನ್ನು ತಮಟೆ ಆಕ್ರಮಿಸಿದೆ. ತಮಟೆಯ ಹಿಂದೆ ಒಂದೇ ಸಾಲಿನಲ್ಲಿ ಮೂರು ಕಿರುಮೂಳೆಗಳು ಇವೆ. ಇದಲ್ಲದೆ ಕೆಲವು ಸ್ನಾಯುಗಳು, ತಂತುಗಳು ಮತ್ತು ಕರ್ಣನಾಳದ ಒಂದು ತುದಿಯೂ ಇದೆ. ಕಿವಿ ಮೂಳೆಗಳ ಚಲನೆಯು ಸ್ನಾಯುಗಳಿಂದ ಪ್ರಭಾವಿತವಾಗುತ್ತದೆ. ಮಧ್ಯ ಕಿವಿಯ ಗೋಡೆಗಳು ತಂತುಗಳ ಮೂಲಕ ಕಿವಿಮೂಳೆಗಳಿಗೆ ಸೇರಿಸಲ್ಪಟ್ಟಿದೆ. ಕರ್ಣನಾಳವು ಮಧ್ಯ ಕಿವಿಯನ್ನು ಗಂಟಲಿನ ಮೇಲ್ಭಾಗಕ್ಕೆ ಕೂಡಿಸುತ್ತದೆ. ಮಧ್ಯ ಕಿವಿಯು ಹೊರಕಿವಿ ಮತ್ತು ಒಳಗಿವಿಗಳನ್ನು ಸೇರಿಸುವ ಸೇತುವೆಯಂತಿದೆ.

ಒಳಗಿವಿಯಲ್ಲಿ ಶ್ರವಣೇಂದ್ರಿಯವಾದ ಕರ್ಣಶಂಖ, ಸಮತೋಲನದ ಇಂದ್ರಿಯವಾದ ನಾಳ ಕೋಶಗಳು ಇವೆ. ಕರ್ಣಶಂಖದಲ್ಲಿ ಹಲವು ಸೂಕ್ಷ್ಮಕೋಶಗಳಿವೆ. ಈ ಕೋಶಗಳ ಎಂಡೋಲಿಂಫ್ ಮತ್ತು ಪೆರಿಲಿಂಫ್ ಎಂಬ ದ್ರವದಿಂದ ಆವೃತವಾಗಿರುತ್ತವೆ. ಕರ್ಣಶಂಖದ ಹಿಂದೆ ಶ್ರವಣ ನರವಿದೆ. ನಾಳ ಕೋಶದಲ್ಲಿ ಮೂರು ಅರ್ಧವೃತ್ತಾಕಾರದ ನಾಳಗಳು ಇವೆ. ಇದು ದೇಹದ ಸಮತೋಲನಕ್ಕೆ ಸಹಾಯ ಮಾಡುತ್ತದೆ. ಶಬ್ದ ಕೇಳುವ ಕೆಲಸಕ್ಕೆ ಕೇವಲ ಕರ್ಣಶಂಖವೇ ಸಾಕು.

## ಕೇಳುವ ಪ್ರಕ್ರಿಯೆ

ಯಾವುದೇ ಶಬ್ದ ಅಥವಾ ಮಾತು, ಧ್ವನಿ ತರಂಗಗಳ ರೂಪದಲ್ಲಿ ಕಿವಿಯನ್ನು ತಲುಪುತ್ತದೆ. ಕಿವಿಯು ತನ್ನ ವಿವಿಧ ಉಪಾಂಗಗಳ ಮೂಲಕ ಮಿದುಳಿಗೆ ಶಬ್ದದ ಸಂದೇಶ ತಲುಪಿಸುವ ಕೆಲಸ ಮಾಡುತ್ತದೆ. ಮಿದುಳು ಆ ಶಬ್ದ ಅಥವಾ ಮಾತನ್ನು ಗ್ರಹಿಸಿ ಅರ್ಥಮಾಡಿಕೊಳ್ಳುತ್ತದೆ. ಕಿವಿಯಲ್ಲಿ ನಡೆಯುವ ಈ ಪ್ರಕ್ರಿಯೆಯನ್ನು ಕೇಳುವುದು ಎನ್ನುತ್ತೇವೆ.

## ನಮಗೆ ಶಬ್ದ ಕೇಳಿಸುವ ರೀತಿ

ಶಬ್ದದ ಅಲೆಗಳು ಕಿವಿಯಾಲೆ ಮತ್ತು ಹೊರಗಿವಿನಾಳದ ಮೂಲಕ ಕಿವಿಯ ತಮಟೆಗೆ ತಾಗುತ್ತವೆ. ಆಗ ಕಿವಿ ತಮಟೆ ಕಂಪಿಸುತ್ತದೆ. ಮಧ್ಯ ಕಿವಿಯಲ್ಲಿನ ಕಿರುಮೂಳೆಗಳ ಮೂಲಕ ಈ ಕಂಪನ ಒಳಗಿವಿಯನ್ನು ತಲುಪುತ್ತದೆ ಅಲ್ಲಿನ ಕರ್ಣಶಂಖದ ದ್ರವದಲ್ಲಿರುವ ಸೂಕ್ಷ್ಮ ಜೀವಕೋಶಗಳನ್ನು ಉತ್ತೇಜಿಸುತ್ತದೆ. ಸೂಕ್ಷ್ಮ ಜೀವಕೋಶಗಳು ಈ ಉತ್ತೇಜಿತ ಕಂಪನ ಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಪರಿವರ್ತಿಸುತ್ತವೆ. ಕರ್ಣಶಂಖದಲ್ಲಿ ಉಂಟಾದ ಈ ವಿದ್ಯುಚ್ಛಕ್ತಿಯು ಶ್ರವಣ ನರದ ಮೂಲಕ ಮಿದುಳಿನ ಶ್ರವಣ ಕೇಂದ್ರಕ್ಕೆ ತಲುಪುತ್ತದೆ. ಅಲ್ಲಿ ಶಬ್ದ ಗ್ರಹಿಕೆಯಾಗುತ್ತದೆ.

## ಕಿವಿ ಕೇಳಿಸುವುದರಿಂದ ಇರುವ ಅನುಕೂಲಗಳು

ನಮ್ಮ ಬೇಕು, ಬೇಡಿಕೆಗಳನ್ನು, ಭಾವನೆಗಳನ್ನು, ಅನಿಸಿಕೆಗಳನ್ನು, ವಿಚಾರಗಳನ್ನು ಹೆಚ್ಚಾಗಿ ಮಾತಿನ ಮೂಲಕ ಬೇರೆಯವರಿಗೆ ತಿಳಿಸುತ್ತೇವೆ. ಆದರೆ, ಮಾತು ಹೊರಬಂದರಷ್ಟೇ ಸಂಪರ್ಕ ಸಾಧ್ಯವಾಗುವುದಿಲ್ಲ. ಆ ಮಾತು ಯಾರಿಗೆ ತಲುಪಬೇಕೋ ಅವರಿಗೆ ತಲುಪಿದರಷ್ಟೇ ಸಂವಹನ ಸಾಧ್ಯವಾಗುವುದು. ಮಾತಿನ ಪ್ರಕ್ರಿಯೆ ಪೂರ್ಣಗೊಳ್ಳಬೇಕಾದರೆ ಕೇಳಿಸಿಕೊಳ್ಳುವ ಕ್ರಿಯೆಯೂ ಸಮರ್ಪಕವಾಗಿ ಆಗಲೇ ಬೇಕು.

ಮಗುವಿನ ವಿದ್ಯಾಭ್ಯಾಸದ ಸಂದರ್ಭದಲ್ಲಿ ಶ್ರವಣ ಶಕ್ತಿಯ ಪಾತ್ರ ಗುರುತರವಾದುದು. ವಿಷಯವನ್ನು ತಿಳಿಯಲು, ಅರ್ಥ ಮಾಡಿಕೊಳ್ಳಲು ಶ್ರವಣಶಕ್ತಿ ಬಹಳ ಮುಖ್ಯ. ಅಪಾಯದಿಂದ ಪಾರಾಗಲೂ ಶ್ರವಣ ಶಕ್ತಿ ನೆರವಿಗೆ ಬರುತ್ತದೆ. ಉದ್ಯೋಗ ಪಡೆಯಲು, ಮನರಂಜನೆ ಮುಂತಾದ ಸಂದರ್ಭಗಳಲ್ಲೂ ಶ್ರವಣ ಶಕ್ತಿಯ ಪಾತ್ರ ಮುಖ್ಯವಾದುದು.

# ಸ್ವ ಪರೀಕ್ಷೆ

## ಕಿವಿ

I ಬಿಟ್ಟ ಜಾಗ ತುಂಬಿ.

1. National Sample Survey Organization 2002 ರ ಪ್ರಕಾರ ಪ್ರತಿ ಒಂದುಲಕ್ಷ ______________ ಜನರಲ್ಲಿ ಜನರಿಗೆ ಶ್ರವಣದೋಷವಿರುವುದು.

2. ಕಿವಿಯಲ್ಲಿ ಭಾಗಗಳಿವೆ. ಅವು ಯಾವುದೆಂದರೆ ______________, ______________ ಮತ್ತು ______________

3. ______________ ಮತ್ತು ______________ ಬೆಳವಣಿಗೆಯು ಮುಖ್ಯವಾಗಿ ಶ್ರವಣ ಶಕ್ತಿಯ ಮೇಲೆ ಅವಲಂಬಿತವಾಗಿದೆ.

I ಉತ್ತರಗಳು:

1. 291
2. ಮೂರು ; ಹೊರಕಿವಿ, ಮಧ್ಯಕಿವಿ ಮತ್ತು ಒಳಕಿವಿ.
3. ಮಾತು ಮತ್ತು ಭಾಷೆಯ.

II ಹೊಂದಿಸಿ ಬರೆಯಿರಿ.

| ಅ | ಆ |
|---|---|
| 1. ಕಿವಿಯಾಲೆ | ಅ. ಒಳಕಿವಿ |
| 2. ಕಿವಿ ತಮಟೆ | ಆ. ಹೊರಕಿವಿ |
| 3. ಕರ್ಣ ಶಂಖ | ಇ. ಮಧ್ಯಕಿವಿ |

II ಉತ್ತರಗಳು.

1. ಆ
2. ಇ
3. ಅ

## ಅಧ್ಯಾಯ - 2

# ಶ್ರವಣ ದೋಷ

### ಶ್ರವಣದೋಷ

ಕಿವಿಯ ಯಾವುದೇ ಭಾಗ ಸರಿಯಾಗಿ ಕೆಲಸ ಮಾಡದಿದ್ದಲ್ಲಿ ಕೇಳಿಸಲು ತೊಂದರೆಯಾಗಬಹುದು. ಕೆಲವು ಸಂದರ್ಭಗಳಲ್ಲಿ ಅಸ್ಪಷ್ಟವಾಗಿ ಕೇಳಿಸಬಹುದು ಅಥವಾ ಮೆಲುವಾದ ಶಬ್ದ ಕೇಳಿಸದೇ ಇರಬಹುದು ಇದು ಭಾಗಶಃ ಶ್ರವಣ ದೋಷ. ಯಾವುದೇ ಶಬ್ದ ಸ್ವಲ್ಪ ಪ್ರಮಾಣದಲ್ಲಿಯೂ ಕೇಳಿಸದಿದ್ದರೆ ಅದು ಪೂರ್ಣ ಶ್ರವಣದೋಷ.

### ಹುಟ್ಟು ಕಿವುಡು ಮತ್ತು ಅನುವಂಶೀಯ ಕಿವುಡುತನ

ಹುಟ್ಟು ಕಿವುಡುತನ ಎಂದರೆ ಹುಟ್ಟಿದಾಗಿನಿಂದಲೂ ಇರಬಹುದಾದ ಕಿವಿಯ ತೊಂದರೆ. ಅನುವಂಶೀಯ ಕಿವುಡು ಎಂದರೆ ಮಗುವಿನ ತಾಯಿ, ತಂದೆ ಅಥವಾ ಇತರ ರಕ್ತ ಸಂಬಂಧದವರಲ್ಲಿ ಕಿವುಡುತನವಿದ್ದು, ಮಗುವಿನಲ್ಲೂ ಕಿವುಡತನ ಕಂಡು ಬಂದರೆ ಅದು ಅನುವಂಶೀಯ ಕಿವುಡು.

### ಶ್ರವಣದೋಷಗಳಲ್ಲಿರುವ ವಿಧಗಳು

ಹೊರಕಿವಿ, ಮಧ್ಯ ಕಿವಿ ಅಥವಾ ಒಳಕಿವಿಯಲ್ಲಿ ಏನಾದರೂ ನ್ಯೂನತೆ ಇದ್ದಲ್ಲಿ ಅಥವಾ ಘಾಸಿಗೊಂಡಲ್ಲಿ ಕಿವಿ ತೊಂದರೆ ಉಂಟಾಗಬಹುದು. ಮುಖ್ಯವಾಗಿ ನಾಲ್ಕು ತರಹದ ಕಿವಿ ತೊಂದರೆಯನ್ನು ಮಕ್ಕಳಲ್ಲಿ ಕಾಣಬುಹುದು. ಅವುಗಳೆಂದರೆ.

1. ಸಂವಹನ ಶ್ರವಣ ದೋಷ
2. ಸಂವೇದನಾ ನರಸಂಬಂಧಿ ಶ್ರವಣದೋಷ
3. ಮಿಶ್ರಶ್ರವಣ ದೋಷ ಹಾಗೂ
4. ಅವ್ಯವಸ್ಥಿತ ಶ್ರವಣ ಪ್ರಕ್ರಿಯೆ.

### ಸಂವಹನ ಶ್ರವಣದೋಷ

ಸಂವಹನ ಶ್ರವಣ ದೋಷ (Conductive hearing loss): ಶಬ್ದ ಒಳಕಿವಿಯನ್ನು ಪ್ರವೇಶಿಸಲು ಆಗುವ ತಡೆಗೆ

ಶಬ್ದ ಸಂವಹನ ಶ್ರವಣದೋಷ ಎಂದು ಹೇಳುತ್ತಾರೆ. ಹೊರಕಿವಿ ಅಥವಾ ಮಧ್ಯಕಿವಿಯಲ್ಲಿ ಯಾವುದೇ ತೊಂದರೆ ಉಂಟಾದಲ್ಲಿ ಅಂದರೆ ಕಿವಿಯಾಲೆ, ಕಿವಿನಾಳದ ಮುಚ್ಚುವಿಕೆ, ಕಿವಿ ಸೋರುವಿಕೆ, ಕಿವಿ ತಮಟೆಯ ತೂತು ಇತ್ಯಾದಿಗಳಿಂದ ಈ ತರಹದ ಕಿವಿತೊಂದರೆ ಕಾಣಬುಹುದು.

## ಸಂವೇದನಾ ನರಸಂಬಂಧಿ ಶ್ರವಣದೋಷ

ಸಂವೇದನಾ ನರ ಸಂಬಂಧಿ ಶ್ರವಣ ದೋಷ (Sensorineural hearing loss): ಒಳಕಿವಿಯ ಹಾಗೂ / ಅಥವಾ ಶ್ರವಣ ನರದಲ್ಲಿ ಯಾವುದೇ ತೊಂದರೆಗೆ ಸಂವೇದನಾ ನರ ಸಂಬಂಧಿ ಶ್ರವಣದೋಷ ಎನ್ನಲಾಗುತ್ತದೆ. ಇದು ಬಹಳಷ್ಟು ಮಕ್ಕಳಲ್ಲಿ ಶಾಶ್ವತವಾಗಿ ಉಳಿದುಕೊಳ್ಳುವ ಅಪಾಯವಿದೆ.

## ಮಿಶ್ರ ಶ್ರವಣ ತೊಂದರೆ

ಮಿಶ್ರ ಶ್ರವಣ ತೊಂದರೆ (Mixed hearing loss): ಹೊರಕಿವಿ ಅಥವಾ ಮಧ್ಯಕಿವಿ ಮತ್ತು ಒಳಕಿವಿಯಲ್ಲಿ ಯಾವುದೇ ತೊಂದರೆ ಉಂಟಾದಲ್ಲಿ, ಈ ರೀತಿಯ ಶ್ರವಣ ದೋಷ ಕಂಡು ಬರುವುದು.

ಹೊರಕಿವಿ ಹಾಗು ಮಧ್ಯಕಿವಿಯಲ್ಲಿನ ತೊಂದರೆಗಳನ್ನು ಕಿವಿ, ಮೂಗು, ಗಂಟಲು ತಜ್ಞರು ಔಷಧ, ಶಸ್ತ್ರಚಿಕಿತ್ಸೆಗಳ ಮೂಲಕ ಗುಣಪಡಿಸುವ ಸಾಧ್ಯತೆಗಳಿವೆ. ಆದರೆ ಒಳಕಿವಿಯಲ್ಲಿನ ತೊಂದರೆಗಳನ್ನು ಔಷಧ ಅಥವಾ ಶಸ್ತ್ರ ಚಿಕಿತ್ಸೆಯ ಮೂಲಕ ಗುಣಪಡಿಸಲಾಗುವುದಿಲ್ಲ.

## ಅವ್ಯವಸ್ಥಿತ ಶ್ರವಣ ಪ್ರಕ್ರಿಯೆ

ಅವ್ಯವಸ್ಥಿತ ಶ್ರವಣ ಪ್ರಕ್ರಿಯೆ (Auditory Processing Disorder): ಒಳಕಿವಿಯಿಂದ ಮಿದುಳಿನವರೆಗಿನ ನರ ತಂತುಗಳಲ್ಲಿ ಇರುವ ತೊಂದರೆ ಇದಕ್ಕೆ ಕಾರಣ. ಮಕ್ಕಳಿಗೆ ಆಡುತ್ತಿರುವ ಮಾತುಗಳು ಕೇಳುತ್ತದೆ. ಆದರೆ ಮಾತುಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಬಹುದು. ಸದ್ದು ಗದ್ದಲ ಇರುವಲ್ಲಿ ಈ ತೊಂದರೆ ಉಲ್ಬಣಗೊಳ್ಳುವುದು.

## ಹೊರಕಿವಿಯ ತೊಂದರೆಗಳು

ಕಿವಿಯಾಲೆಯ ವಿರೂಪ, ಹೊರ ಕಿವಿನಾಳದ ಮುಚ್ಚುವಿಕೆ, ಕಿವಿ ಗುಗ್ಗೆ, ಕಿವಿನಾಳದಲ್ಲಿ ಹೊರ ವಸ್ತುಗಳು ಹಾಗೂ ಹೊರ ಕಿವಿಯ ಸೋಂಕು ಕಿವಿ ಕೇಳಿಸದಂತೆ ಮಾಡುವ ತೊಂದರೆಗಳು.

1. **ಕಿವಿಯಾಲೆಯ ವಿರೂಪ:** ಕಿವಿಯಾಲೆಯೇ ಇಲ್ಲದಿರುವುದು ಅಥವಾ ಕಿವಿಯಾಲೆಯು ಪೂರ್ಣವಾಗಿ ಬೆಳೆದಿಲ್ಲದೆ ಇರುವುದು. ಆದರೆ, ಕಿವಿಯ ಮಿಕ್ಕ ಭಾಗಗಳು ಸರಿಯಾಗಿದ್ದಲ್ಲಿ ಈ ಸ್ಥಿತಿಯು ಪೂರ್ತಿ ಕಿವುಡುತನಕ್ಕೆ ಕಾರಣವಾಗುವುದಿಲ್ಲ.

2. **ಹೊರಕಿವಿನಾಳದ ಮುಚ್ಚುವಿಕೆ:** ಈ ನಾಳ ಪೂರ್ತಿಯಾಗಿ ಅಥವಾ ಭಾಗಶಃ ಒಂದೇ ಕಿವಿ ಅಥವಾ ಎರಡು ಕಿವಿಗಳಲ್ಲೂ ಮುಚ್ಚಿರಬಹುದು. ಇದು ಸಾಮಾನ್ಯವಾಗಿ ಆನುವಂಶೀಯವಾಗಿ ಬರುತ್ತದೆ. ಈ ರೀತಿಯ ತೊಂದರೆ ಇದ್ದಲ್ಲಿ ಕಿವುಡುತನ ತೀವ್ರವಾಗಿರುವುದಿಲ್ಲ ಏಕೆಂದರೆ ಶಬ್ದ ತರಂಗಗಳು ಬೇರೆಯೇ ರೀತಿಯಲ್ಲಿ (ತಲೆ ಮೂಳೆಗಳ ಕಂಪನದಿಂದ) ಒಳಗಿವಿಯನ್ನು ತಲುಪುತ್ತವೆ.ಈ ರೀತಿಯ ಕಿವಿ ತೊಂದರೆಯಲ್ಲಿ ಮಧ್ಯ ಮತ್ತು ಒಳಗಿವಿಯ ವಿರೂಪಗಳೂ ಸೇರಿಕೊಂಡರೆ ಕಿವುಡುತನ ಬರಬಹುದು.

**3. ಕಿವಿಗುಗ್ಗೆ:** ಹೊರಕಿವಿನಾಳದಲ್ಲಿರುವ ಗ್ರಂಥಿಗಳಿಂದ ಉತ್ಪತ್ತಿಯಾಗುವ ಮೇಣದಂತಹ ವಸ್ತುವೇ ಕಿವಿ ಗುಗ್ಗೆ. ಕೆಲವು ಬಾರಿ ಒಳಗೇ ಉಳಿದು ಗಟ್ಟಿಯಾಗಿ ಪೂರ್ಣ ಅಥವಾ ಭಾಗಶಃ ಹೊರಕಿವಿನಾಳವನ್ನು ಮುಚ್ಚಬಹುದು. ಆಗ ಶಬ್ದ ತರಂಗಗಳು ಸರಿಯಾಗಿ ಕಿವಿ ತಮಟೆಯನ್ನು ತಲುಪದ ಕಾರಣ ಮೆಲುವಾದ ಶಬ್ದಗಳನ್ನು ಕೇಳುವುದರಲ್ಲಿ ತೊಂದರೆಯಾಗಬಹುದು. ಕಿವಿಗುಗ್ಗೆ ಸಾಮಾನ್ಯವಾಗಿ ಅದಾಗಿಯೇ ಹೊರ ಬರುತ್ತದೆ. ಕೆಲವೊಮ್ಮೆ ಅದು ಗಟ್ಟಿಯಾಗಿ, ತೆಗೆಯಲು ಆಗದಿದ್ದಲ್ಲಿ ಕಿವಿ ತಜ್ಞರ ನೆರವು ಪಡೆಯಬೇಕು.



**4. ಹೊರ ವಸ್ತುಗಳು:** ಸಾಧಾರಣವಾಗಿ ಮಕ್ಕಳು ಆಟವಾಡುವಾಗ, ಕಲ್ಲು, ಬಳಪ, ಸಣ್ಣಕಾಳು, ಬೀಜ ಮುಂತಾದವುಗಳನ್ನು ಹೊರಗಿವಿನಾಳದಲ್ಲಿ ಹಾಕಿಕೊಳ್ಳಬಹುದು. ದೊಡ್ಡವರಲ್ಲಿ ಸಣ್ಣಕೀಟಗಳು ಕಿವಿ ನಾಳದೊಳಗೆ ಹೋಗಬಹುದು.

> ***ಗಮನಿಸಿ:*** ಕಾಳು, ಬೀಜ ಕಿವಿಯೊಳಗೆ ಹೋಗಿದ್ದಲ್ಲಿ ಕಿವಿಗೆ ನೀರು ಹಾಕಬಾರದು. ಯಾವುದಾದರೂ ಕೀಟ ಕಿವಿಯ ಒಳಗೆ ಹೋದಲ್ಲಿ ಕಿವಿ ತಜ್ಞರ ಬಳಿ ಹೋಗಿ ತೆಗೆಸಬೇಕು.

**5. ಹೊರಗಿವಿಯ ಸೋಂಕು:** ಹೊರಗಿವಿಯಲ್ಲಿ ಅನೇಕ ಬಗೆಯ ಜೀವಾಣುಗಳಿಂದ ಸೋಂಕು ಬರಬಹುದು. ಈಜುವವರಲ್ಲಿ ಸಾಧಾರಣವಾಗಿ ಶಿಲೀಂದ್ರದ ಸೋಂಕು ಕಾಣಬರುತ್ತದೆ. ಇದರಿಂದ ಕೆರೆತ, ನೋವು ಮತ್ತು ಕಿವುಡುತನ ಉಂಟಾಗಬಹುದು.



**ಕಿವುಡುತನಕ್ಕೆ ಕಾರಣವಾಗುವ ಮಧ್ಯಕಿವಿಯ ತೊಂದರೆಗಳು**

ಮಧ್ಯಕಿವಿಯಲ್ಲಿ ಉಂಟಾಗುವ ತೊಂದರೆಗಳಿಂದ ಬರುವ ಕಿವುಡುತನಕ್ಕೆ ಕಾರಣಗಳು ಈ ಕೆಳಗಿನಂತಿವೆ.

**ಅ) ಕಿವಿ ತಮಟೆಯ ಹರಿಯುವಿಕೆ ಅಥವಾ ತೂತು:** ಚೂಪಾದ ವಸ್ತುವಿನಿಂದ ಕಿವಿ ಗುಗ್ಗೆಯನ್ನು ತೆಗೆಯುವುದು. ಅತೀವ ಗದ್ದಲ ಅಥವಾ ಮಧ್ಯಕಿವಿಯ ರೋಗ ಸ್ಥಿತಿ ಮುಂತಾದ ಕಾರಣಗಳಿಂದ ತಮಟೆಯು ಹರಿಯಬಹುದು ಅಥವಾ ತೂತಾಗಬಹುದು. ಹೀಗಾದಾಗ ಕಿವಿ ತಮಟೆಯ ಮೇಲೆ ಬಿದ್ದ ಶಬ್ದ ತರಂಗಗಳು ಒಳಕಿವಿಗೆ ಸರಿಯಾಗಿ ತಲುಪುವುದಿಲ್ಲ.



**ಆ) ಮಧ್ಯ ಕಿವಿಯ ಸೋಂಕು:** ಸಂವಹನ ಕಿವುಡುತನಕ್ಕೆ ಮಧ್ಯ ಕಿವಿಯ ಸೋಂಕು ಒಂದು ಮುಖ್ಯ ಕಾರಣ. ನೆಗಡಿ, ಗಂಟಲು ನೋವಿನಂತಹ ಸೋಂಕುಗಳು ಕರ್ಣನಾಳದ ಮೂಲಕ ಮಧ್ಯ ಕಿವಿಗೆ ತಗಲುತ್ತದೆ. ಸೋಂಕು ತಗುಲಿದ ಮಧ್ಯಕಿವಿಯು ದ್ರವದಿಂದ ತುಂಬಿಕೊಳ್ಳುತ್ತದೆ. ದ್ರವವು ಹೆಚ್ಚಾದಂತೆಲ್ಲಾ ಕಿವಿನೋವು ಕೂಡ ಹೆಚ್ಚುತ್ತದೆ. ಕಡೆಗೆ ಕಿವಿ ತಮಟೆ ಒಡೆದು ಹೊರಗಿವಿ ನಾಳದ ಮೂಲಕ ದ್ರವವು ಹೊರಬರುತ್ತದೆ. ಆಗ ನೋವು ಕಡಿಮೆ ಆಗುತ್ತದೆ. ಈ ಸ್ಥಿತಿಯಲ್ಲಿ ಮುಂಜಾಗರೂಕತೆ ವಹಿಸಿ, ತಕ್ಕ ಚಿಕಿತ್ಸೆ ಮಾಡಿಸದಿದ್ದಲ್ಲಿ ರೋಗವು ಉಲ್ಬಣಗೊಂಡು ಮೆದುಳಿಗೆ ಸಂಬಂಧಪಟ್ಟ ಅನೇಕ ತೀವ್ರ ಕಾಯಿಲೆಗಳಿಗೆ ಕಾರಣವಾಗಬಹುದು.

ಇ) ಕಿರುಮೂಳೆಗಳ ವಿರೂಪ: ಕಿರುಮೂಳೆಗಳು ಕಿವಿ ತಮಟೆಗೂ ಕರ್ಣ ಶಂಖದಲ್ಲಿರುವ ಅಂಡಾಕಾರದ ಕಿಂಡಿಗೂ ಸಂಪರ್ಕ ಕಲ್ಪಿಸುತ್ತದೆ. ಶಬ್ದ ತರಂಗಗಳು ಹಾದು ಹೋಗುವ ಈ ಮಾರ್ಗದಲ್ಲಿ ಎಲ್ಲೇ ಅಡಚಣೆಯಾದರೂ ಕಿವುಡುತನ ಉಂಟಾಗುತ್ತದೆ. ಈ ರೀತಿಯ ಅಡಚಣೆಗೆ ಈ ಕೆಳಗಿನ ಅಂಶಗಳು ಕಾರಣವಾಗಬಹುದು.

**1) ಹುಟ್ಟಿನಿಂದಲೇ ಕಿರುಮೂಳೆಗಳು ಇಲ್ಲದಿರುವಿಕೆ.**

**2) ಅಪಘಾತದಿಂದ ಕಿರುಮೂಳೆಗಳ ಮುರಿಯುವಿಕೆ.**

**3) ಕಿರುಮೂಳೆಗಳ ನಡುವೆ ಸರಿಯಾದ ಸಂಪರ್ಕವಿಲ್ಲದಿರುವಿಕೆ.**

**4) ಯಾವುದಾದರೂ ಒಂದು ಕಿರುಮೂಳೆಯ ಗಡುಸಾಗುವಿಕೆ.**

**5) ಕಿರುಮೂಳೆಗಳ ಚಲನೆಗೆ ದ್ರವ, ಗುಳ್ಳೆ ಅಥವಾ ಗ್ರಂಥಿಗಳ ಅಡ್ಡಿ.**

**6) ಕಿವಿ ಗಡಸುರೋಗ.**

**ಕಿವಿ ಗಡಸುರೋಗ:** ಇದು ಅನುವಂಶೀಯವಾಗಿ ಬರುವ ರೋಗ, ಭಾರತೀಯರಲ್ಲಿ ಅದರಲ್ಲೂ ಮಹಿಳೆಯರಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕಿರುಮೂಳೆಗಳಲ್ಲಿ ಒಂದಾದ ರಿಕಾಪು ಮತ್ತು ಮಧ್ಯ ಕಿವಿಯ ಒಳಗೋಡೆಗಳು ಈ ರೋಗದಿಂದ ಪ್ರಭಾವಿತವಾಗುತ್ತದೆ. ಮೊದಲಿಗೆ ಶಬ್ದ ಸಂವಹನದ ತೊಂದರೆ ಕಂಡು ಬರುತ್ತದೆ. ಶಸ್ತ್ರ ಚಿಕಿತ್ಸೆಯಿಂದ ಈ ತೊಂದರೆಯನ್ನು ನಿವಾರಿಸಬಹುದು. ಆದರೆ ಚಿಕಿತ್ಸೆ ಮಾಡದಿದ್ದಲ್ಲಿ ರೋಗವು ಉಲ್ಬಣಗೊಂಡು ಒಳಗಿವಿಯನ್ನು ಪೂರ್ತಿಯಾಗಿ ಆವರಿಸುತ್ತದೆ.

ಒಳಕಿವಿಯ ತೊಂದರೆಗಳಿಂದ ಅಥವಾ ಕಿವಿಯ ನರದ ತೊಂದರೆಯಿಂದಲೂ ಕಿವುಡುತನ ಉಂಟಾಗಬಹುದು. ಈ ರೀತಿಯ ಕಿವುಡುತನಕ್ಕೆ ಕೆಳಕಂಡ ಅಂಶಗಳು ಕಾರಣಗಳಾಗಬಹುದು.

ಅ) ಹುಟ್ಟಿನಿಂದಲೇ ಇರಬಹುದಾದ ವಿರೂಪಗಳು: ಗರ್ಭಾವಸ್ಥೆಯಲ್ಲಿ ಏಕಾಣುಜೀವಿ ಮತ್ತು ವೈರಸ್‌ಗಳ ಸೋಂಕು, ಕೆಲ ಔಷಧಗಳ ಅತಿಯಾದ ಸೇವನೆ, ಅತಿಯಾದ ಕ್ಷ-ಕಿರಣಗಳಿಗೆ ಮೈ ಒಡ್ಡುವಿಕೆ ಮೊದಲಾದ ಅಂಶಗಳು ಬೆಳೆಯುತ್ತಿರುವ ಶಿಶುವಿನ ಮೇಲೆ ಪರಿಣಾಮ ಬೀರಿ ಒಳಗಿವಿಯ ವಿರೂಪಕ್ಕೆ ಕಾರಣವಾಗಬಹುದು. ಹೆರಿಗೆಯ ಸಮಯದಲ್ಲಿ ಉಂಟಾಗುವ ತೊಂದರೆಗಳಿಂದಾಗಿಯೂ ಕಿವಿಯ ನರದ ಮಾರ್ಗದಲ್ಲಿ ಅಥವಾ ಒಳಕಿವಿಯಲ್ಲಿ ತೊಂದರೆ ಉಂಟಾಗಬಹುದು. ಅನುವಂಶೀಯವಾಗಿ ಕಿವುಡುತನವಿರುವ ಕುಟುಂಬಗಳಲ್ಲಿ ಹುಟ್ಟುವ ಮಕ್ಕಳಿಗೆ ಒಳಗಿವಿಯು ವಿರೂಪವಾಗುವ ಸಾಧ್ಯತೆಗಳು ಹೆಚ್ಚು.









**ಆ) ಕರ್ಣ ಶಂಖದ ಸೂಕ್ಷ್ಮ ಕೋಶಗಳ ನಾಶವಾಗುವಿಕೆ.**

ಕರ್ಣಶಂಖದ ಸೂಕ್ಷ್ಮ ಕೋಶಗಳು ಈ ಕೆಳಕಂಡ ಕಾರಣಗಳಿಂದ ನಾಶವಾಗಬಹುದು.




**1) ಪೆಟ್ಟು:** ಪಟಾಕಿಯಂತಹ ದೊಡ್ಡ ಶಬ್ದ ಅಥವಾ ಹೊರಕಿವಿಯ ಮೇಲೆ ಬೀಳುವ ಜೋರಾದ ಏಟು ಕರ್ಣಶಂಖದೊಳಗಿನ ಸೂಕ್ಷ್ಮ ಭಾಗಗಳಿಗೆ ಘಾಸಿ ಮಾಡಬಹುದು. ಶ್ರವಣ ಕೇಂದ್ರಕ್ಕೆ ಸಂಬಂಧಪಟ್ಟಂತೆ ಇರುವ ತಲೆ ಮೂಳೆಗೆ ಪೆಟ್ಟಾದರೂ ಕಿವುಡುತನ ಉಂಟಾಗಬಹುದು.



**2) ಔಷಧ:** ಸ್ಟ್ರೆಪ್ಟೋಮೈಸಿನ್ ಮತ್ತು ಕ್ಯಾನಮೈಸಿನ್‌ನಂತಹ ಔಷಧಗಳು ಕಿವಿಗೆ ಹಾನಿಕಾರಕ ಎಂದು ತಿಳಿದು ಬಂದಿದೆ. ಈ ಔಷಧಗಳು ಕೆಲವೊಮ್ಮೆ ಜೀವ ಉಳಿಸಲು ಅತ್ಯಮೂಲ್ಯವಾದುದರಿಂದ ಇವುಗಳ ಉಪಯೋಗವನ್ನು ಪೂರ್ತಿಯಾಗಿ ನಿಲ್ಲಿಸಲು ಸಾಧ್ಯವಿಲ್ಲ. ಆದುದರಿಂದ ಇಂತಹ ಔಷಧಿಗಳನ್ನು ತಜ್ಞ ವೈದ್ಯರ ಸಲಹೆ ಮೇರೆಗೆ ಮಾತ್ರ ಉಪಯೋಗಿಸಬೇಕು.

**3) ವೈರಸ್:** ಏಕಾಣು ಜೀವಿಗಳ ಸೋಂಕು ತಗುಲಿದ ನಂತರ ಸೂಕ್ತ ಚಿಕಿತ್ಸೆ ದೊರಕದಿದ್ದರೆ ಕಿವುಡುತನ ಕಂಡು ಬರಬಹುದು. ಗದ್ದಕಟ್ಟು, ಸೀತಾಳೆ ಮತ್ತು ಸಿಡುಬಿನಂತಹ ವೈರಸ್‌ನ ಸೋಂಕುಗಳು, ಟೈಫಾಯಿಡ್‌ನಂತಹ ಏಕಾಣು ಜೀವಿಯ ಸೋಂಕು ಕಿವುಡುತನಕ್ಕೆ ಕಾರಣವಾಗಬಹುದು. ಮೆದುಳು ಜ್ವರದಿಂದಲೂ ಒಳಕಿವಿಯಲ್ಲಿ ಕುಂದುಂಟಾಗಭಹುದು. ಈ ತೊಂದರೆಗೆ ಒಂದು ಅಥವಾ ಎರಡೂ ಕಿವಿಗಳು ಈಡಾಗಬಹುದು. ಶಸ್ತ್ರಚಿಕಿತ್ಸೆಯ ನಂತರ ಒಳಗಿವಿಗೆ ಸೋಂಕು ಹರಡುವುದರಿಂದಲೂ ಕಿವುಡುತನ ಬರಬಹುದು.

ಕರ್ಣ ಶಂಖದಿಂದ ಮೆದುಳಿನವರೆಗೆ ಹಾದಿಯಲ್ಲಿನ ಕಿವಿಯ ನರದ ಯಾವುದೇ ಭಾಗವು ಹಾನಿಗೀಡಾಗಬುದು. ಇದು ಹೆಚ್ಚಿನ ಸಂದರ್ಭಗಳಲ್ಲಿ ನರದ ಮೇಲೆ ಬೆಳೆಯುವ ಗಡ್ಡೆಯಿಂದ ಆಗುತ್ತದೆ. ಈ ಗಡ್ಡೆಯ ಗಾತ್ರ ಮತ್ತು ಅದು ಇರುವ ಜಾಗವನ್ನು ಅವಲಂಬಿಸಿ ಈ ನರದ ತೊಂದರೆ ಉಂಟಾಗಬಹುದು. ವಾಂತಿ, ತಲೆಸುತ್ತುವುದು ಮತ್ತು ಕಿವುಡುತನ ಈ ರೋಗದ ಸಾಮಾನ್ಯ ಲಕ್ಷಣ. ಇದರಿಂದ ಮಾತಿನ ಶಬ್ದಗಳನ್ನು ಗ್ರಹಿಸುವುದಕ್ಕೆ ತೊಂದರೆಯಾಗಬಹುದು. ಒಳಕಿವಿಯಿಂದ ಮೆದುಳಿಗೆ ಸಂದೇಶ ರವಾನೆಯಲ್ಲಿ ತೊಂದರೆಯಾಗಬಹುದು.

### *ಶ್ರವಣ ಕಾರ್ಯಗತಿ ಲೋಪಗಳು / ಅವ್ಯವಸ್ಥಿತ ಶ್ರವಣ ಪ್ರಕ್ರಿಯೆ*

ಕೆಲವರಿಗೆ ಕಿವುಡುತನವಿರುವುದಿಲ್ಲ. ಆದರೆ, ಸಾಮಾನ್ಯವಾಗಿ ಕಿವಿ ಕೇಳಿಸಿದರೂ, ಶಬ್ದ ಗ್ರಹಿಸುವುದರಲ್ಲಿ ದೋಷವಿರುತ್ತದೆ.ಇದರಿಂದಾಗಿ ಕಲಿಕೆಯಲ್ಲಿ, ಗಮನ ಕೇಂದ್ರೀಕರಿಸುವುದರಲ್ಲಿ ಮತ್ತು ಜ್ಞಾಪಕ ಶಕ್ತಿಯಲ್ಲಿ ನ್ಯೂನತೆ ಇರಬಹುದು.

## ಕಿವುಡುತನ ಇರುವ ಮಕ್ಕಳು ಸಾಮಾನ್ಯವಾಗಿ ಎದುರಿಸಬಹುದಾದ ತೊಂದರೆಗಳು

- ಮಾತು ಭಾಷೆಯಲ್ಲಿ ತೊಂದರೆಯಾಗಬಹುದು.
- ಮಾತಿಗೆ ತಕ್ಷಣ ಸ್ಪಂದಿಸಲು ಸಾಧ್ಯವಾಗದಿದ್ದಾಗ ಜೊತೆಯಲ್ಲಿರುವವರಿಗೆ ಕಿರಿಕಿರಿ.
- ಶಾಲೆಯಲ್ಲಿ ಪಾಠವನ್ನು ಆಲಿಸಿ ಅರ್ಥಮಾಡಿಕೊಳ್ಳಲು ಕಷ್ಟವಾಗುವ ಕಾರಣ ಇತರ ಮಕ್ಕಳ ಹಾಗೂ ಶಿಕ್ಷಕರ ಎದುರಲ್ಲಿ ಅವಮಾನ, ಮುಜುಗರ.
- ಇತರ ಮಕ್ಕಳು ಆಟವಾಡಲು ಜೊತೆಗೆ ಸೇರಿಸಿಕೊಳ್ಳದ ಕಾರಣ ಕಾಡುವ ಒಂಟಿತನ
- ಪಾಠಗಳನ್ನು ಆಲಿಸಿ, ಅರ್ಥಮಾಡಿಕೊಳ್ಳಲು ಕಷ್ಟವಾಗುವುದರಿಂದ ವಿದ್ಯಾಭ್ಯಾಸ ಕುಂಠಿತಗೊಳ್ಳಬಹುದು.

ಮಗುವು ಬೇರೆಯವರ ಮಾತು ಕೇಳಿಸಿಕೊಂಡು ಶಬ್ದ ಕೇಳುವುದನ್ನು ಹಾಗೂ ಮಾತನ್ನು ಕಲಿತುಕೊಳ್ಳುತ್ತದೆ. ಕಿವಿ ಕೇಳದಿದ್ದಾಗ ಸುತ್ತ ಮುತ್ತಲಿನ ಶಬ್ದ ಕೇಳಿಸಿಕೊಳ್ಳಲಾಗುವುದಿಲ್ಲ. ಇದರಿಂದಾಗಿ ಮಾತು ಕಲಿಯಲು ಆಗುವುದಿಲ್ಲ. ಆಗ ಸಹಜವಾಗಿಯೇ ಭಾಷಾ ಬೆಳವಣಿಗೆ ಕುಂಠಿತವಾಗುವುದು, ಅಥವಾ ಬೆಳವಣಿಗೆ ಆಗುವುದೇ ಇಲ್ಲ. ವಿದ್ಯಾಭ್ಯಾಸದಲ್ಲಿಯೂ ತೊಂದರೆಯಾಗುತ್ತದೆ. ಹಾಗೂ ಇಂತಹ ಮಗು ಸಾಮಾನ್ಯವಾಗಿ ಬೇರೆಯವರ ಜೊತೆ ಬೆರೆಯುವುದಿಲ್ಲ. ಈ ಎಲ್ಲಾ ಅಂಶಗಳು ಮಗುವಿನ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತದೆ. ಈ ಪರಿಣಾಮಗಳನ್ನು ತಡೆಯಲು ಮಗುವಿನ ತೊಂದರೆಯನ್ನು ಬೇಗ ಗುರುತಿಸಿ, ಚಿಕ್ಕ ವಯಸ್ಸಿನಲ್ಲೇ ಸಂಪೂರ್ಣ ತರಬೇತಿಗೆ ಅವಕಾಶ ಕಲ್ಪಿಸಬೇಕು.

## ಶ್ರವಣದೋಷಕ್ಕೆ ಈಡಾಗದಂತೆ ಕಿವಿಯನ್ನು ರಕ್ಷಿಸುವ ಬಗೆ

- ಕಿವಿಗೆ ಚೂಪಾದ ವಸ್ತುಗಳನ್ನು ಅಥವಾ ಯಾವುದೇ ವಸ್ತುಗಳನ್ನು ಹಾಕಬಾರದು.
- ಅಶುದ್ಧ ನೀರಿನಲ್ಲಿ ಈಜಾಡುವಾಗ ಕಿವಿಗೆ ಕಿವಿಬಿರಡೆಗಳನ್ನು ಉಪಯೋಗಿಸಬೇಕು.
- ನೆಗಡಿ, ಕೆಮ್ಮು ಆದಾಗ ನಿರ್ಲಕ್ಷಿಸದೆ ವೈದ್ಯರಿಗೆ ತೋರಿಸಿ ಚಿಕಿತ್ಸೆ ಪಡೆಯಬೇಕು.
- ಜೋರಾದ ಶಬ್ದ ಅಥವಾ ವಿಪರೀತ ಗದ್ದಲಕ್ಕೆ ಕಿವಿಯೊಡ್ಡಬಾರದು.
- ಕಿವಿಯ ಗುಗ್ಗೆಯನ್ನು ಆಗಾಗ್ಗೆ ತೆಗೆಸಬೇಕು.
- ಯಾವುದೇ ಕಾರಣಕ್ಕೂ ಕಿವಿಗೆ ಎಣ್ಣೆ, ನೀರು ಮುಂತಾದವನ್ನು ಹಾಕಬಾರದು.
- ರಕ್ತ ಸಂಬಂಧಿಗಳ ನಡುವೆ ಮದುವೆ ಆದರೆ ಮಗುವಿನಲ್ಲಿ ಶ್ರವಣದೋಷ ಕಂಡು ಬರುವ ಸಾಧ್ಯತೆ ಹೆಚ್ಚು ಇರುವುದರಿಂದ, ರಕ್ತ ಸಂಬಂಧಿಗಳಲ್ಲಿ ಮದುವೆಯನ್ನು ಆದಷ್ಟು ತಪ್ಪಿಸಬೇಕು.
- ಗರ್ಭಾವಸ್ಥೆಯಲ್ಲಿ ಇರುವ ಮಹಿಳೆ ಸೂಕ್ತ ರೋಗ ನಿರೋಧಕ ಚುಚ್ಚುಮದ್ದು ಪಡೆಯಬೇಕು.
- ಹುಟ್ಟಿದ ಮಗುವಿಗೂ ರೋಗ ನಿರೋಧಕ ಲಸಿಕೆ ಕೊಡಿಸಬೇಕು.
- ಸ್ಟ್ರೆಪ್ಟೋಮೈಸಿನ್, ಜೆಂಟಾಮೈಸಿನ್‌ನಂತಹ ಕಿವಿಗೆ ಹಾನಿ ಮಾಡುವ ಔಷಧಗಳನ್ನು ವೈದ್ಯರ ಸಲಹೆ ಪಡೆಯದೇ ಉಪಯೋಗಿಸಬಾರದು.
- ತಲೆ ಮತ್ತು ಕಿವಿಗಳಿಗೆ ಪೆಟ್ಟಾಗದಂತೆ ಎಚ್ಚರ ವಹಿಸಬೇಕು.

ಸ್ವ ಪರೀಕ್ಷೆ

# ಶ್ರವಣ ದೋಷ

I ಬಿಟ್ಟ ಜಾಗ ತುಂಬಿ.

1. ಕಿವಿಯ ನಾಲ್ಕು ವಿಧದ ತೊಂದರೆಗಳಾವುದೆಂದರೆ ______________ ,______________, ______________ ಮತ್ತು ______________
2. ______________ಅನ್ನು ಚೂಪಾದ ವಸ್ತುಗಳಿಂದ ಹೊರ ತೆಗೆದಾಗ ಕಿವಿ ತಮಟೆಗೆ ಪೆಟ್ಟಾಗಬಹುದು.
3. ಹೊರ ವಸ್ತುಗಳು ಕಿವಿಗೆ ಹೋದಾಗ ______________ ಬಳಿ ತೆಗೆಸಿಕೊಳ್ಳಬೇಕು.
4. ಕಿವಿ ಸೋರುವುದನ್ನು ನಿರ್ಲಕ್ಷಿಸಿದರೆ ______________ಗೆ ಸಂಬಂಧ ಪಟ್ಟ ಖಾಯಿಲೆ ಉಂಟಾಗಬಹುದು.
5. ______________ ಶಬ್ದಗಳಿಗೆ ಕಿವಿಯೊಡ್ಡಬಾರದು.
6. ಶ್ರವಣ ತೊಂದರೆಯು ______________ ಮತ್ತು ______________ ಬೆಳವಣಿಗೆಯನ್ನು ಕುಂಟಿತಗೊಳಿಸುತ್ತದೆ.

ಉತ್ತರಗಳು.

1. ಸಂವಹನ ಶ್ರವಣ ದೋಷ, ಸಂವೇದನಾ ನರಸಂಬಂಧಿ ಶ್ರವಣ ದೋಷ, ಮಿಶ್ರ ಶ್ರವಣ ದೋಷ ಮತ್ತು ಅವ್ಯವಸ್ಥಿತ ಶ್ರವಣ ಪ್ರಕ್ರಿಯೆ.
2. ಕಿವಿಗುಗ್ಗೆ.
3. ಕಿವಿ ಮೂಗು ಮತ್ತು ಗಂಟಲು ತಜ್ಞರ.
4. ಮಿದುಳು
5. ಜೋರಾದ
6. ಮಾತು ಮತ್ತು ಭಾಷಾ

# ಅಧ್ಯಾಯ - 3

# ಶ್ರವಣ ದೋಷಗಳನ್ನು ಗುರುತಿಸುವುದು

## ಕಿವುಡುತನವನ್ನು ಆರಂಭದಲ್ಲಿಯೇ ಪತ್ತೆಹಚ್ಚುವುದರಿಂದ ಆಗುವ ಪ್ರಯೋಜನಗಳು

1. ಮಾತು ಮತ್ತು ಭಾಷಾ ಬೆಳವಣಿಗೆ ಸಹಜವಾಗಿ ನಡೆಯುತ್ತದೆ.

2. ವಿದ್ಯಾಭ್ಯಾಸಕ್ಕೆ ತೊಂದರೆಯಾಗುವುದಿಲ್ಲ.

3. ಮಗುವಿಗೆ ಬೇಗನೆ ಚಿಕಿತ್ಸೆ ಕೊಡಿಸಬಹುದು ಅಥವಾ ಶ್ರವಣೋಪಕರಣ ಬಳಸುವಂತೆ ಮಾಡಬಹುದು.

4. ಇತರ ಮಕ್ಕಳೊಂದಿಗೆ ಬೆರೆಯಲು ಸುಲಭಸಾಧ್ಯವಾಗುವ ಕಾರಣ ಒಂಟಿತನ, ಕೀಳರಿಮೆ, ಹಿಂಜರಿಕೆ ಮುಂತಾದವುಗಳನ್ನು ಚಿಕ್ಕಂದಿನಲ್ಲಿಯೇ ತಡೆಗಟ್ಟಬಹುದು.

## ಚಿಕ್ಕ ಮಗುವಿನಲ್ಲಿ ಶ್ರವಣದೋಷ ಇದೆ ಎಂಬುದನ್ನು ಪತ್ತೆ ಹಚ್ಚುವ ರೀತಿ

ಮಗುವಿನಿಂದ 5 ರಿಂದ 8 ಅಡಿಗಳ ಅಂತರದಲ್ಲಿ ನಿಂತುಕೊಂಡು ಮೆಲ್ಲನೆ ಚಪ್ಪಾಳೆ ತಟ್ಟುವುದು, ಗಿಲಕಿ ಆಡಿಸುವುದು, ಶಿಳ್ಳೆ ಹಾಕುವುದು, ತಟ್ಟೆ ಬಡಿಯುವುದು, ಮಗುವಿನ ಹೆಸರು ಹಿಡಿದು ಕರೆಯುವುದು..... ಇತ್ಯಾದಿ ಕ್ರಿಯೆಗಳನ್ನು ಮಾಡಿದಾಗ ಮಗು ಸೂಕ್ತ ರೀತಿಯಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತದೆ. ಕಣ್ಣು ಮಿಟುಕಿಸುವುದು, ಕೈ ಕಾಲು ಅಲ್ಲಾಡಿಸುವುದು, ಬೆಚ್ಚಿಬೀಳುವುದು, ಶಬ್ದಬಂದ ಕಡೆ ಕತ್ತು ತಿರುಗಿಸುವುದು, ಕಣ್ಣು ಹರಿಸುವುದು....... ಇಂತಹ ಪ್ರತಿಕ್ರಿಯೆ ವ್ಯಕ್ತವಾಗದಿದ್ದರೆ ಕಿವುಡುತನವಿದೆಯೆಂದು ಶಂಕಿಸಬಹುದು. ಈ ಕೆಳಗಿನ ಬೆಳವಣಿಗೆ ಪಟ್ಟಿ ಉಪಯೋಗಿಸಿ ಶ್ರವಣದೋಷ ಗುರುತಿಸಬಹುದು.

## ಮಕ್ಕಳಲ್ಲಿ ಶಬ್ದಕ್ಕೆ ಪ್ರತಿಕ್ರಿಯಿಸುವ ಬೆಳವಣಿಗೆ

**ಹುಟ್ಟಿದಾಗಿನಿಂದ - 3 ತಿಂಗಳು**

ಜೋರಾದ ಶಬ್ದಗಳಿಗೆ (ಅಂದರೆ ಸುಮಾರು 90 dB SPL ಉದಾ: ಹಿಟ್ಟಿನ ಗಿರಣಿಯ ಶಬ್ದ ಮಟ್ಟ) ನಿದ್ದೆಯಿಂದ ಎಚ್ಚರಗೊಳ್ಳುವುದು.

**3 ರಿಂದ 4 ತಿಂಗಳು**

ಮಗು ಸಾಮಾನ್ಯವಾಗಿ 50-60 dB SPL ಶಬ್ದಗಳಿಗೆ (ಉದಾ: ಸಾಮಾನ್ಯವಾಗಿ ಸಂಭಾಷಣೆ ಮಾಡುವ ಮಟ್ಟ) ಸ್ವಲ್ಪ ಮಟ್ಟಿಗೆ ತಲೆ ತಿರುಗಿಸುವುದು.

**4 ರಿಂದ 7 ತಿಂಗಳು**

ಮಗು ಸಣ್ಣ ಶಬ್ದಗಳಿಗೂ (ಅಂದರೆ ಸಂಭಾಷಣೆ ಮಟ್ಟಕ್ಕಿಂತಲೂ ಕಡಿಮೆ ಮಟ್ಟದ 40-50 dB SPL) ಶಬ್ದ ಬಂದ ಕಡೆ ಅನಿರ್ದಿಷ್ಟವಾಗಿ ತಲೆ ತಿರುಗಿಸುವುದು.

**7 ರಿಂದ 9 ತಿಂಗಳು**

ಸಣ್ಣ ಶಬ್ದಗಳು (ಅಂದರೆ 30-40 dB SPLಉದಾ: ದಪ್ಪ ಪಿಸು ಮಾತಿನ ಮಟ್ಟ) ಬಂದಾಗ, ಶಬ್ದ ಬಂದ ಕಡೆಗೆ ನಿರ್ದಿಷ್ಟವಾಗಿ ತಲೆ ತಿರುಗಿಸಬಲ್ಲದು.

| | |
|---|---|
| | **9ರಿಂದ 13 ತಿಂಗಳು**<br><br>ಮಗುವು ಸಣ್ಣ ಶಬ್ದಗಳಿಗೆ ( 25-35 dB SPL ಅಂದರೆ ಪಿಸು ದನಿಯ ಮಟ್ಟ) ನಿರ್ದಿಷ್ಟವಾಗಿ ಪಕ್ಕಕ್ಕೆ ಹಾಗೂ ಕೆಳಗೆ ತಲೆ ತಿರುಗಿಸಬಲ್ಲದು. |
| **13 ರಿಂದ 16 ತಿಂಗಳು**<br><br>ಮಗು ಸಣ್ಣ ಶಬ್ದಗಳಿಗೆ ( 25-30 dB SPL) ನಿರ್ದಿಷ್ಟವಾಗಿ ಪಕ್ಕ ಹಾಗೂ ಕೆಳಗೆ ತಲೆ ತಿರುಗಿಸುವುದು, ಹಾಗೂ ಮೇಲಿನಿಂದ ಶಬ್ದ ಬಂದಾಗ, ಅನಿರ್ದಿಷ್ಟವಾಗಿ ಮೇಲೆ ತಲೆ ಎತ್ತುವುದು. | |
| | **16 ರಿಂದ 21 ತಿಂಗಳು**<br><br>ಮಗುವು (25 - 30 dB SPL) ಮಟ್ಟದ ಶಬ್ದಗಳಿಗೂ ನಿರ್ದಿಷ್ಟವಾಗಿ ಪಕ್ಕ, ಕೆಳಗೆ ಹಾಗೂ ಮೇಲೆ ತಲೆ ತಿರುಗಿಸುವುದು. |
| **21 ರಿಂದ 24 ತಿಂಗಳು**<br><br>ಮಗುವು ನಿರ್ದಿಷ್ಟವಾಗಿ ಯಾವುದೇ ಕೋನದಿಂದ ಬರುವ ಶಬ್ದ (25 dB SPL, ಅಂದರೆ ಪಿಸು ದನಿ ಮಟ್ಟದ ಶಬ್ದ)ಗಳಿಗೂ ನಿರ್ದಿಷ್ಟವಾಗಿ ತಲೆ ತಿರುಗಿಸಬಲ್ಲದು. | |

ಈ ಮೇಲಿನ ಪ್ರತಿಕ್ರಿಯೆ ಸರಿಯಾದ ವಯಸ್ಸಿನಲ್ಲಿ ಕಂಡು ಬರದಿದ್ದಲ್ಲಿ ಕಿವುಡುತನವಿದೆಯೆಂದು ಶಂಕಿಸಬಹುದು.

## ಶಾಲೆಗೆ ಹೋಗುತ್ತಿರುವ ಮಗುವಿನಲ್ಲಿ ಶ್ರವಣದೋಷವನ್ನು ಗುರುತಿಸಬಹುದಾದ ರೀತಿ

- ಮಗು ಪಾಠದ ಕಡೆಗೆ ಗಮನ ಕೊಡುತ್ತಿಲ್ಲವೆ?
- ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲು ತಡಕಾಡುತ್ತದೆಯೇ? ಅಥವಾ ಅಸಮಂಜಸ ಉತ್ತರ ನೀಡುತ್ತದೆಯೇ?
- ಪಾಠಗಳನ್ನು ಅಥವಾ ಹೇಳಿದನ್ನು ಮತ್ತೆ ಹೇಳುವಂತೆ ಕೇಳುವುದೇ?
- ಬೇರೆ ಮಕ್ಕಳೊಂದಿಗೆ ಆಟ, ಪಾಠದಲ್ಲಿ ಬೆರೆಯದೇ, ಪ್ರತ್ಯೇಕವಾಗಿ ಇರುತ್ತದೆಯೇ?
- ಕಿವಿಸೋರುವಿಕೆ, ತಲೆಸುತ್ತುವಿಕೆಗೆ ಮಗು ಈಡಾಗುತ್ತಿರುತ್ತದೆಯೇ?

ಇಂತಹ ಲಕ್ಷಣಗಳು ಕಂಡು ಬಂದಲ್ಲಿ ಆ ಮಗುವಿಗೆ ಶ್ರವಣದೋಷ ಇದೆ ಎಂದು ಶಂಕಿಸಿ, ತಪಾಸಣೆಗೆ ಒಳಪಡಿಸಬೇಕು.

## ಶ್ರವಣದೋಷದ ಲಕ್ಷಣಗಳು

ಮಗುವಿನಲ್ಲಿ ಇರುವ ಶ್ರವಣ ದೋಷದ ಲಕ್ಷಣಗಳು:

- ತಾಯಿಯ / ಪರಿಚಯಸ್ತರ ಧ್ವನಿ ಗುರುತಿಸದಿರುವುದು.
- ಧ್ವನಿ/ ಸ್ವರಗಳನ್ನು ಉಚ್ಚರಿಸದಿರುವುದು.
- ಮೊದಲ ಪದ/ ಮಾತಿನ ಬೆಳವಣಿಗೆ ನಿಧಾನವಾಗುವುದು.
- ಮಾತಿಗೆ ಗಮನಕೊಡದೆ ಇರುವುದು.
- ಒಮ್ಮೆ ಹೇಳಿದ್ದನ್ನು ಪದೇ ಪದೇ ಹೇಳುವುದು.
- ಜೋರಾದ ಶಬ್ದಗಳನ್ನು ಕೇಳಿಸಿಕೊಳ್ಳುವುದು.
- ಮಾತನಾಡುವವರ ಮುಖದ ಕಡೆಗೆ ಹೆಚ್ಚು ಗಮನ ಹರಿಸುವುದು.
- ಕಾಣಿಸದಂತೆ ಹಿಂದೆ ನಿಂತು ಮಾತನಾಡಿದಾಗ ಸ್ಪಂದಿಸದಿರುವುದು
- ಏನಾದರೂ ಕೇಳಿದರೆ ಸಂಬಂಧವಿಲ್ಲದ ಉತ್ತರ ನೀಡುವುದು.
- ಗುಂಪಿನಲ್ಲಿ ಗದ್ದಲದ ನಡುವೆ ಮಾತು ಅರ್ಥ ಮಾಡಿಕೊಳ್ಳುವುದರಲ್ಲಿ ಕಷ್ಟವಾಗುವುದು.
- ಶಾಲೆಯಲ್ಲಿ ಉಪಾಧ್ಯಾಯರು ಪಾಠ ಮಾಡುವಾಗ ಅರ್ಥಮಾಡಿಕೊಳ್ಳಲು ಕಷ್ಟವಾಗುವುದು ಅಥವಾ ಪಾಠದ ಕಡೆಗೆ ಗಮನ ನೀಡದಿರುವುದು.
- ಕಿವಿಯಲ್ಲಿ, ತಲೆಯ ಒಳಗೆ ಗುಂಯ್‌ಗುಟ್ಟುವುದು.
- ಕೆಲವೊಮ್ಮೆ ಚೆನ್ನಾಗಿ ಮಾತು ಅರ್ಥಮಾಡಿಕೊಂಡರೆ ಕೆಲವೊಮ್ಮೆ ಅರ್ಥಮಾಡಿಕೊಳ್ಳಲು ಕಷ್ಟವಾಗುವುದು.
- ಕಿವಿ ಸೋರುವಿಕೆ.
- ಕಿವಿ ನೋವು.
- ತಲೆ ಸುತ್ತುವುದು.
- ಪದೆ ಪದೇ ನೆಗಡಿ, ಕೆಮ್ಮು ಆಗುವುದು.
- ಬೇರೆಯವರು ಮಾತನಾಡಿದಾಗ ಅದಕ್ಕೆ ಏನೂ ಉತ್ತರ ಕೊಡದೆ ಸುಮ್ಮನೆ ಇರುವುದು.

ಈ ಮೇಲಿನ ಕೆಲವು ಲಕ್ಷಣಗಳು ಮಗುವಿನಲ್ಲಿ ಕಂಡು ಬಂದಲ್ಲಿ ಶ್ರವಣದೋಷವಿದೆ ಎಂದು ಶಂಕಿಸಿ, ಶ್ರವಣ ತಜ್ಞರಿಂದ ತಪಾಸಣೆ ಮಾಡಿಸಬೇಕು.

ಹುಟ್ಟಿದ ದಿನವೇ ಮಕ್ಕಳ ಶ್ರವಣಶಕ್ತಿಯನ್ನು ಪರಿಶೀಲಿಸುವುದಕ್ಕೆ ಹಲವಾರು ಸೌಲಭ್ಯಗಳು ಇವೆ. ಅವುಗಳಲ್ಲಿ ನೀವು (High risk checklist) ಎಂದರೆ ಮಕ್ಕಳು ಕಿವಿ ಕೇಳಿಸುವಿಕೆಯ ಸಂಬಂದದಲ್ಲಿ ಅಪಾಯದ ಅಂಚಿನಲ್ಲಿರುವುದುನ್ನು ಗುರುತಿಸುವ ಪ್ರಶ್ನಾವಳಿ / ತಪಶೀಲು ಪಟ್ಟಿ ಬಳಸಬಹುದು. ಕಿವುಡುತನ ಇದೆಯೆಂದು ಶಂಕೆ ಇದ್ದಲ್ಲಿ ಇವುಗಳ ಸಹಾಯದಿಂದ ಮಗುವಿನಲ್ಲಿ ಶ್ರವಣ ದೋಷವನ್ನು ಬೇಗ ಗುರುತಿಸಿ ಶ್ರವಣ ತಜ್ಞರ ಬಳಿ ತಪಾಸಣೆಗೆ ಕರೆದೊಯ್ಯಬೇಕು. ಶಂಕೆ ಮಾತ್ರಕ್ಕೆ ಕಿವಿ ತೊಂದರೆ ಇದೆ ಎಂದು ಅರ್ಥವಲ್ಲ. ಆದರೂ ಪರೀಕ್ಷೆಗೆ ಒಳಪಡಿಸಿಯೇ ನಿರ್ಧಾರಕ್ಕೆ ಬರುವುದು ಸೂಕ್ತ. ತಜ್ಞರು ಹಲವಾರು ಉಪಕರಣಗಳು. ಪರೀಕ್ಷೆಗಳಿಂದ ಕಿವಿಯ ತೊಂದರೆಯ ವಿಧ ಹಾಗೂ ಪ್ರಮಾಣವನ್ನು ಕಂಡು ಹಿಡಿಯುತ್ತಾರೆ.

**ಅಪಾಯದ ಅಂಚಿನಲ್ಲಿರುವವರನ್ನು ಗುರುತಿಸುವ ಆತಂಕ ಸೂಚಿ ತಪಶೀಲು ಪಟ್ಟಿ (High Risk Checklist)**

ಶ್ರವಣ ದೋಷವನ್ನುಂಟು ಮಾಡುವ ಕೆಲ ಅಂಶಗಳನ್ನು ಹಾಗೂ ಶ್ರವಣದೋಷದ ಕೆಲ ಲಕ್ಷಣಗಳನ್ನು ಅವಲಂಬಿಸಿರುವ ಪ್ರಶ್ನೆಗಳಿಗೆ "ಹೌದು" ಅಥವಾ "ಇಲ್ಲ" ಎಂದು ಉತ್ತರಿಸುವ ಮೂಲಕ, ಶ್ರವಣ ತೊಂದರೆ ಇದೆಯೋ ಇಲ್ಲವೋ ಎಂದು ಪತ್ತೆ ಹಚ್ಚಬಹುದು. ಈ ತಪಶೀಲು ಪಟ್ಟಿಯ ಕೆಲ ಪ್ರಶ್ನೆಗಳು ಈ ರೀತಿ ಇವೆ.

**ತಪಶೀಲು ಪಟ್ಟಿಯ ಪ್ರಶ್ನೆಗಳು ಈ ರೀತಿ ಇವೆ.**

1) ಮಗುವಿನ ತಂದೆ-ತಾಯಿಯ ರಕ್ತ ಸಂಬಂಧದವರಲ್ಲಿ ಯಾರಿಗಾದರೂ ಕಿವುಡುತನ ಇದೆಯೆ? ಹೌದು ☐ ಇಲ್ಲ ☐

2) ಮಗುವಿನ ತಾಯಿ ಬಸಿರಾಗಿದ್ದಾಗ ಯಾವುದಾದರೂ ಸೊಂಕು ರೋಗಗಳಿಗೆ ತುತ್ತಾಗಿದ್ದರೆ? ಹೌದು ☐ ಇಲ್ಲ ☐

3) ಮಗು 9 ತಿಂಗಳಿಗೆ ಮುನ್ನ ಅಥವಾ ನಂತರ ಹುಟ್ಟಿತೆ? ಹೌದು ☐ ಇಲ್ಲ ☐

4) ಮಗು ಹುಟ್ಟಿದಾಗ ನೀಲಿ/ ಹಳದಿ ಬಣ್ಣವಿತ್ತೆ? ಹೌದು ☐ ಇಲ್ಲ ☐

5) ಮಗು ಹುಟ್ಟಿದ ಕೂಡಲೆ ಅತ್ತಿತ್ತೆ? ಹೌದು ☐ ಇಲ್ಲ ☐

6) ಮಗುವಿನ ತೂಕ 1.5 ಕಿಲೋಗಿಂತ ಕಡಿಮೆ ಇತ್ತೆ? ಹೌದು ☐ ಇಲ್ಲ ☐

7) ಮಗು ಹುಟ್ಟಿದಾಗ ಮಗುವಿನ ಮುಖ, ಕಿವಿ ಅಥವಾ ತಲೆಯಲ್ಲಿ ಏನಾದರೂ ನ್ಯೂನತೆ ಇತ್ತೇ? ಹೌದು ☐ ಇಲ್ಲ ☐

8) ಮಗುವಿಗೆ ಕಿವಿ ತೊಂದರೆ ಇರಬಹುದು ಎಂದು ಯಾರಾದರೂ ಮುಖ್ಯವಾಗಿ ತಂದೆ ತಾಯಿಯರು ಶಂಕಿಸಿದರೆ? ಹೌದು ☐ ಇಲ್ಲ ☐

9) ಮಗು ಹುಟ್ಟಿದ ಮೇಲೆ ಯಾವುದಾದರೂ (ಉದಾ: ದಡಾರ, ಮಿದುಳು ಜ್ವರ) ಸೋಂಕಿಗೆ ತುತ್ತಾಗಿತ್ತೇ? ಹೌದು ☐ ಇಲ್ಲ ☐

10) ಮಗುವಿಗೆ ಯಾವುದಾದರೂ ಪೆಟ್ಟು ಆಗಿತ್ತೇ? ಹೌದು ☐ ಇಲ್ಲ ☐

11) ಮಗುವಿನ ಕಿವಿ ಸೋರುತ್ತಿತ್ತೇ? ಹೌದು ☐ ಇಲ್ಲ ☐

## ಶ್ರವಣದೋಷ ಇಲ್ಲ ಎಂದು ಖಾತರಿ ಮಾಡಿಕೊಳ್ಳ ಬಹುದಾದ ಲಕ್ಷಣಗಳು

ಶ್ರವಣದೋಷ ಇಲ್ಲ ಎಂದು ಗುರುತಿಸಬಹುದಾದ ಲಕ್ಷಣಗಳು ಹೀಗಿವೆ.

**ಹುಟ್ಟಿದಾಗಿನಿಂದ ನಾಲ್ಕು ತಿಂಗಳವರೆಗೆ**

- ಜೋರಾದ ಶಬ್ದಕ್ಕೆ ಮಗು ಬೆಚ್ಚಿ ಬೀಳುವುದು.
- ಅಳುತ್ತಿರುವ ಮಗು ತಾಯಿಯ/ಪರಿಚಯಸ್ತರ ಧ್ವನಿ ಕೇಳಿದಾಗ ಅಳು ನಿಲ್ಲಿಸುವುದು/ ನಗುವುದು.
- ತಾಯಿಯ ಧ್ವನಿಯನ್ನು ಗುರುತಿಸುವುದು.

**4 ರಿಂದ 8 ತಿಂಗಳ ವರೆಗೆ:**



- ಮಗುವು ಶಬ್ದ ಬಂದ ದಿಕ್ಕಿನ ಕಡೆಗೆ ಕಣ್ಣು/ ತಲೆಯನ್ನು ತಿರುಗಿಸುವುದು.
- ಗಿಲಕಿ ಶಬ್ದ, ಇತರ ಮಧುರವಾದ ಶಬ್ದ ಸಂಗೀತದ ಶಬ್ದದಿಂದ ಆನಂದಗೊಳ್ಳುವುದು.
- ಮಗುವು ಅನೇಕ ತರದ ಶಬ್ದಗಳನ್ನು ಉಚ್ಛರಿಸುವುದು, ಅಥವಾ ಧ್ವನಿ ಹೊರಡಿಸುವುದು.

**8 ರಿಂದ 12 ತಿಂಗಳವರೆಗೆ**

- ಮಗುವಿನ ಧ್ವನಿಯಲ್ಲಿ ಏರು-ತಗ್ಗು ಇರುವುದು.
- ದೊಡ್ಡವರು ಮಾತನಾಡುವ ಲಯಬದ್ಧತೆಯನ್ನು ಅನುಕರಿಸುವ ಧ್ವನಿ
- ಸಂಗೀತ ಆಲಾಪಿಸುವುದು, ಆನಂದಿಸುವುದು.
- ಮೊದಲ ಅರ್ಥಗರ್ಭಿತ ಪದ ಹೇಳುವುದು.



**12 ರಿಂದ 16 ತಿಂಗಳವರೆಗೆ**

- ಮಗು ಹಲವಾರು ಪದಗಳನ್ನು ಅರ್ಥಮಾಡಿಕೊಳ್ಳುತ್ತದೆ.
- 20-25 ಪದಗಳನ್ನು ಉಚ್ಛರಿಸುತ್ತದೆ.

**16 ರಿಂದ 24 ತಿಂಗಳು**

- ಯಾವುದೇ ಮಾತು, ಪದಕ್ಕೆ ಅರ್ಥವಿದೆ ಎಂಬುದರ ಅರಿವು
- 100-200 ಪದಗಳ ಬಳಕೆ
- 2 ಅಥವಾ 3 ಪದವಿರುವ ವಾಕ್ಯಗಳ ಬಳಕೆ
- ಹೀಗೆ ಮಗು ಬೆಳೆದಂತೆಲ್ಲ ಮಗುವಿನ ಮಾತು ಹಾಗೂ ಭಾಷಾ ಬೆಳವಣಿಗೆ ಮುಂದುವರೆಯುವುದು.

ಕಿವುಡುತನ ಇದೆ ಎಂಬ ಶಂಕೆ ಇದ್ದಲ್ಲಿ, ಕೂಡಲೆ ಶ್ರವಣ ತಜ್ಞರಿಂದ ಕಿವಿಯ ತಪಾಸಣೆ ಮಾಡಿಸಿ- ನಿಜವಾಗಿಯೂ ಕಿವುಡುತನ ಇದೆಯೋ ಇಲ್ಲವೋ ಎಂದು ಖಾತ್ರಿ ಮಾಡಿಕೊಳ್ಳಬೇಕು. ಕಿವುಡುತನವಿದ್ದಲ್ಲಿ ಶ್ರವಣ ತಜ್ಞರು ಸೂಚಿಸಿದ ಶ್ರವಣೋಪಕರಣವನ್ನು ಬಳಸಿ, ಮಾತು-ಭಾಷಾ ಕಲಿಕೆಗೆ ತರಬೇತಿ ಕೊಡಬೇಕು.




### ಶ್ರವಣದೋಷದ ಪ್ರಮಾಣ

ಪರೀಕ್ಷೆಯ ನಂತರ ಶ್ರವಣ ಮಟ್ಟವನ್ನು 'ಆಡಿಯೊ ಗ್ರಾಮ್' ಎನ್ನುವ ಒಂದು ಗ್ರಾಫ್‌ನಲ್ಲಿ ನಮೂದಿಸಲಾಗುವುದು. ಈ ಗ್ರಾಫ್‌ನಿಂದ ಕಿವುಡುತನದ ಪ್ರಮಾಣ ಹಾಗೂ ಸ್ವರೂಪವನ್ನು ತಿಳಿದುಕೊಳ್ಳಬಹುದು.

| | ಪ್ರಮಾಣದ ಮಟ್ಟ | ಪರೀಕ್ಷೆಯಲ್ಲಿ ಕಂಡು ಬಂದ ಅಂಶ |
|---|---|---|
| 1. | ಲಘು (Mild) | ದೂರದಲ್ಲಿ ಆಡುವ ಮಾತು ಹಾಗೂ ಮೆಲುದನಿಯಲ್ಲಿ, ತಗ್ಗು ದನಿಯಲ್ಲಿ ಆಡಿದ ಮಾತನ್ನು ಕೇಳಲು ಕಷ್ಟವಾಗುವುದು. |
| 2. | ಗಣನೀಯ (Moderate) | ಸುಮಾರು 3-5 ಅಡಿ ದೂರದಲ್ಲಿ ಆಡಿದ ಮಾತನ್ನು ಕೇಳಲು ಕಷ್ಟವಾಗುವುದು. ಶ್ರವಣೋಪಕರಣದ ಉಪಯೋಗ ಮಾಡಬೇಕಾಗುವುದು. |
| 3. | ತೀವ್ರ (Severe) | ತುಂಬಾ ಹತ್ತಿರದಿಂದ, ಜೋರಾಗಿ ಮಾತನಾಡಿದರೆ ಮಾತ್ರ ಕೇಳುವುದು. ಮಾತು ಅರ್ಥಮಾಡಿಕೊಳ್ಳಲು ಆಗದಿರುವುದು. ಶ್ರವಣೋಪಕರಣದ ಬಳಕೆ ಮಾಡಬೇಕಾಗುವುದು. |
| 4. | ಅತಿ ತೀವ್ರ (Profound) | ಅತೀ ಜೋರಾದ ಶಬ್ದ ಕೇಳಲೂ ತೊಂದರೆ, ಮುಖ್ಯವಾಗಿ ಸನ್ನೆಗಳ ಮೂಲಕ ಸಂಪರ್ಕ, ಶ್ರವಣೋಪಕರಣದ ಬಳಕೆ ಅಗತ್ಯ. |

## ಸ್ವ ಪರೀಕ್ಷೆ

### ಶ್ರವಣ ದೋಷಗಳನ್ನು ಗುರುತಿಸುವುದು

**ಸರಿಯಾಗಿ ಉತ್ತರಿಸಿ.**

1. ಶ್ರವಣದೋಷದ ಲಕ್ಷಣಗಳಾವುವೆಂದರೆ , __________, __________ಮತ್ತು __________
2. ಕಿವುಡುತನವನ್ನು ಆರಂಭದಲ್ಲಿಯೇ ಪತ್ತೆ ಹಚ್ಚಬೇಕು. (ಸರಿ / ತಪ್ಪು)
3. ಶ್ರವಣ ದೋಷವನ್ನು ಖಾತರಿ ಮಾಡಿಕೊಳ್ಳಲು ರ ಬಳಿ ಹೋಗಬೇಕು.
4. ಶ್ರವಣ ದೋಷವನ್ನು ಪತ್ತೆ ಹಚ್ಚಲು ನೀವು ಮನೆಯಲ್ಲಿ __________ ಮತ್ತು__________ ಉಪಯೋಗಿಸ ಬಹುದು.

**ಉತ್ತರಗಳು.**

1. ಮಾತು ಪುನರುಚ್ಚರಿಸಲು ಕೇಳುವುದು, ಜೋರಾದ ಶಬ್ದಗಳಿಗೆ ಮಾತ್ರ ಪ್ರತಿಕ್ರಿಯಿಸುವುದು ಮತ್ತು ಮಾತನಾಡುವವರ ಮುಖವನ್ನು ಗಮನಿಸುವುದು.
2. ಸರಿ.
3. ಶ್ರವಣ ತಜ್ಞ.
4. ಅಪಾಯದ ಅಂಚಿನಲ್ಲಿರುವವರನ್ನು ಗುರುತಿಸುವ ತಪಶೀಲು ಪಟ್ಟಿ ಮತ್ತು ಶಬ್ದಕ್ಕೆ ಪ್ರತಿಕ್ರಿಯಿಸುವ ಬೆಳವಣಿಗೆ.

# ಅಧ್ಯಾಯ - 4

## ಶ್ರವಣೋಪಕರಣಗಳು (Hearing aid)

ಹೊರಕಿವಿ ಅಥವಾ/ ಹಾಗೂ ಮಧ್ಯ ಕಿವಿಯ ತೊಂದರೆ ಇದ್ದಲ್ಲಿ ಕಿವಿ-ಮೂಗು-ಗಂಟಲು ತಜ್ಞರು ಔಷಧ ಅಥವಾ ಶಸ್ತ್ರ ಚಿಕಿತ್ಸೆಯ ಮೂಲಕ ಅದನ್ನು ಗುಣ ಮಾಡಬಹುದು. ಆದರೆ ಒಳ ಕಿವಿಯ ತೊಂದರೆ ಇದ್ದಲ್ಲಿ, ಅಥವಾ ಔಷಧ/ಶಸ್ತ್ರ ಚಿಕಿತ್ಸೆಯ ಮೂಲಕ ದೋಷವು ಪೂರ್ಣ ಗುಣವಾಗದಿದ್ದಲ್ಲಿ, ಶ್ರವಣೋಪಕರಣದ ಬಳಕೆ ಮಾಡಬೇಕಾಗುತ್ತದೆ.

ಹುಟ್ಟಿನಿಂದಲೆ ಬರುವ ಕಿವುಡುತನಕ್ಕೆ ಅಥವಾ ಔಷಧದಿಂದ ಸರಿ ಹೋಗದ ಕಿವುಡುತನಕ್ಕೆ ಸಾಮಾನ್ಯವಾಗಿ ಸೂಕ್ತ ಶ್ರವಣೋಪಕರಣದ ಬಳಕೆಯೇ ಸರಿಯಾದ ಉಪಾಯ. ಇದರ ಸಹಾಯದಿಂದ ಮಾತು ಮತ್ತು ಭಾಷೆಯ ಬೆಳವಣಿಗೆಗೆ ತರಬೇತಿ ನೀಡ ಬೇಕಾಗುತ್ತದೆ.



### ಶ್ರವಣೋಪಕರಣ

ಮೂಲಭೂತವಾಗಿ ಶ್ರವಣೋಪಕರಣ ಒಂದು ಸಣ್ಣ "ಧ್ವನಿ ವರ್ಧಕ". ಅದು ಶಬ್ದವನ್ನು ಜೋರಾಗಿ ಮಾಡಿ ಕೇಳಿಸಿಕೊಳ್ಳಲು ಸಹಾಯ ಮಾಡುತ್ತದೆ. ಇದನ್ನು ತಜ್ಞರ ಸಲಹೆ ಪಡೆದೇ ಕೊಳ್ಳಬೇಕು.

ಕಿವಿ ತೊಂದರೆಯ ಸ್ವರೂಪ ಹಾಗೂ ಮಟ್ಟಕ್ಕೆ ತಕ್ಕಂತೆ ಶ್ರವಣೋಪಕರಣ ಬಳಸಬೇಕಾಗುತ್ತದೆ. ಶ್ರವಣ ತಜ್ಞರು ಕಿವಿಯನ್ನು ಪರೀಕ್ಷಿಸಿ ವ್ಯಕ್ತಿಗೆ ಸರಿ ಹೊಂದುವ ಉಪಕರಣವನ್ನು ಸೂಚಿಸುವ ಕಾರಣ ಅವರ ಸಲಹೆ ಪಡೆದೇ ಶ್ರವಣೋಪಕರಣವನ್ನು ಉಪಯೋಗಿಸಬೇಕು.

ಶ್ರವಣೋಪಕರಣವನ್ನು ಮಗು ಸ್ನಾನ ಮಾಡುವಾಗ ಮಲಗುವಾಗ ಹೊರತು ಪಡಿಸಿ, ಉಳಿದೆಲ್ಲ ಸಮಯದಲ್ಲೂ ಧರಿಸಿಕೊಂಡಿರಬೇಕಾಗುತ್ತದೆ. ಶ್ರವಣೋಪಕರಣ ಕಿವುಡುತನವನ್ನು ಗುಣಪಡಿಸುವುದಿಲ್ಲ. ಹಾಗಾಗಿ ಅದನ್ನು ಶ್ರವಣದೋಷ ಇರುವವರು ನಿರಂತರವಾಗಿ ಬಳಸುತ್ತಿರಬೇಕಾಗುತ್ತದೆ.

ಕೇವಲ ಶ್ರವಣೋಪಕರಣದ ಬಳಕೆಯಿಂದ ಮಾತು ಬರುವುದಿಲ್ಲ. ಕೇಳಿಸಿಕೊಳ್ಳಲು ಹಾಗೂ ಮಾತು ಮತ್ತು ಭಾಷೆ ಕಲಿಯಲು ನಿರಂತರ ತರಬೇತಿಯ ಅವಶ್ಯಕತೆ ಇದೆ. ಇದಕ್ಕೆ ವಾಕ್-ಶ್ರವಣ ತಜ್ಞರ ಸಹಾಯ ಬೇಕಾಗುತ್ತದೆ.

ಶ್ರವಣೋಪಕರಣ ಬಳಸಲು ಸೂಕ್ತ ಸಮಯ ಮಗು ಚಿಕ್ಕಂದಿನಲ್ಲಿಯೇ ಉಪಕರಣ ಬಳಸಿದರೆ, ಇತರ ಮಕ್ಕಳಂತೆ ಬೇಗನೆ ಮಾತುಗಳನ್ನು ಆಲಿಸಲು, ಮಾತನಾಡಲು ಕಲಿಯುತ್ತದೆ. ಇದರಿಂದ ಇತರ ಮಕ್ಕಳೊಂದಿಗೆ ಬೆರೆಯಲು, ಶಾಲೆಗೆ ಸೇರಲು ಯಾವುದೇ ತೊಂದರೆ ಆಗುವುದಿಲ್ಲ. ತಡಮಾಡಿದಷ್ಟು ತೊಂದರೆಯೇ ಹೆಚ್ಚು. 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ' ಎಂಬ ಮಾತು ಕೇಳಿದ್ದೀರಲ್ಲ.... ಚಿಕ್ಕಂದಿನಲ್ಲೇ ಅಭ್ಯಾಸ ಮಾಡಿದರೆ ಬೆಳೆಯುತ್ತಾ ಬಂದಂತೆ ಅದಕ್ಕೆ ಹೊಂದಿಕೊಂಡು, ಮಾತು ಹಾಗೂ ಭಾಷಾ ಬೆಳವಣಿಗೆಯನ್ನು ಸಾಧಿಸುತ್ತದೆ.




**ಶ್ರವಣೋಪಕರಣದ ರಚನೆ ಹಾಗೂ ಕೆಲಸ**

ಶ್ರವಣೋಪಕರಣವು ಮೈಕ್ರೊಫೋನ್ (Microphone), ಆಂಪ್ಲಿಫೈಯರ್ (Amplifier) ಹಾಗೂ ರಿಸೀವರ್ (Receiver) ಗಳಿಂದ ರಚಿತವಾಗಿದ್ದು, ಇದಕ್ಕೆ ಬ್ಯಾಟರಿಯ ಶಕ್ತಿ ಬೇಕಾಗುತ್ತದೆ. ಇದನ್ನು ಉಪಯೋಗಿಸಲು ಕಿವಿಯ ಅಚ್ಚನ್ನು ಉಪಯೋಗಿಸ ಬೇಕಾಗುತ್ತದೆ.

ಮೈಕ್ರೋಫೋನ್ ಶಬ್ದದ ಅಲೆಗಳನ್ನು ವಿದ್ಯುತ್ ಅಲೆಗಳನ್ನಾಗಿ ಪರಿವರ್ತಿಸುತ್ತದೆ. ಈ ವಿದ್ಯುತ್ ಅಲೆಗಳನ್ನು ಆಂಪ್ಲಿಫೈಯರ್ ವರ್ಧಿಸಿ ಕೊಡುತ್ತದೆ. ವರ್ಧಿತ ವಿದ್ಯುತ್ ಅಲೆಗಳನ್ನು ರಿಸೀವರ್ ಮತ್ತೆ ಶಬ್ದದ ಅಲೆಗಳನ್ನಾಗಿ ಪರಿವರ್ತಿಸುತ್ತದೆ. ಈ ಶಬ್ದವು ಕಿವಿ ಅಚ್ಚಿನ ಮೂಲಕ ಕಿವಿ ತಲುಪುತ್ತದೆ. ಶಬ್ದ ಮಟ್ಟ ನಿಯಂತ್ರಕದ ಮೂಲಕ ಶಬ್ದವನ್ನು ಹೆಚ್ಚು ಕಡಿಮೆ ಮಾಡಬಹುದು. ಸ್ವರ ಮಟ್ಟ ನಿಯಂತ್ರಕ ಸ್ವರದ ಸ್ತರ ನಿಯಂತ್ರಣಕ್ಕೆ ಸಹಾಯ ಮಾಡುತ್ತದೆ.

1. ಮೈಕ್ರೊಫೋನ್
2. ಆಂಪ್ಲಿಫೈಯರ್
3. ರಿಸೀವರ್
4. ಬ್ಯಾಟರಿ
5. ಶಬ್ದಮಟ್ಟ ನಿಯಂತ್ರಕ
6. ಸ್ವರ ಮಟ್ಟ ನಿಯಂತ್ರಕ.



ಶ್ರವಣೋಪಕರಣಗಳ ವಿಧ

ವಿವಿಧ ರೀತಿಯ ಶ್ರವಣೋಪಕರಣಗಳು ಸಿಗುತ್ತವೆ.

1. ಜೇಬಿನಲ್ಲಿ ಇಡುವಂತಹುದು: ಇದರಲ್ಲಿ ಮೈಕ್ರೊಫೋನ್ ಹಾಗೂ ಧ್ವನಿ ವರ್ಧಕವು ಜೇಬಿನಲ್ಲಿಡಬಹುದಾದಂತಹ ಒಂದು ಸಣ್ಣ ಪೆಟ್ಟಿಗೆಯಲ್ಲಿ ಇದ್ದು, ರಿಸೀವರ್ ಅನ್ನು ಒಂದು ತಂತಿಯ ಮೂಲಕ ಕಿವಿ ಅಚ್ಚಿನ ಸಹಾಯದಿಂದ, ಕಿವಿಯಲ್ಲಿ ಇರಿಸಬಹುದಾಗಿದೆ.

ಜೇಬಿನಲ್ಲಿ ಇಡುವಂತಹ ಈ ತರಹದ ಶ್ರವಣೋಪಕರಣವನ್ನು ಭಾರತ ಸರ್ಕಾರದ ಸಮಾಜ ಕಲ್ಯಾಣ ಇಲಾಖೆ ತಿಂಗಳಿಗೆ ರೂ.6,500 ಕ್ಕೂ ಕಡಿಮೆ ಆದಾಯ ಇರುವ ಶ್ರವಣದೋಷವಿರುವವರಿಗೆ ಉಚಿತವಾಗಿ ಕೊಡುವುದು. 6,501 ರಿಂದ 10,000 ಆದಾಯ ಇರುವವರಿಗೆ ಶೇಕಡ 50% ರಷ್ಟು ರಿಯಾಯಿತಿ ಬೆಲೆಯಲ್ಲಿ ಕೊಡಲಾಗುವುದು. ಅಂಗಡಿಯಲ್ಲಿ ಇದರ ಬೆಲೆ ಒಂದು ಸವೀರದಿಂದ ರಿಂದ ಮೂರು ಸಾವಿರ ರೂಪಾಯಿಗಳವರೆಗೂ ಇದೆ.

2. ಕಿವಿಯ ಹಿಂಬದಿಯಲ್ಲಿ ಅಳವಡಿಸುವ ಶ್ರವಣೋಪಕರಣ (Behind - The - Ear): ಹೆಸರೇ ಹೇಳುವ ಹಾಗೆ ಶ್ರವಣೋಪಕರಣವನ್ನು ಕಿವಿಯ ಹಿಂಭಾಗದಲ್ಲಿ ಅಳವಡಿಸಬಹುದು. ಈ ತರಹದ ಉಪಕರಣವನ್ನು FM technology ಗೂ ಅಳವಡಿಸಬಹುದು, ಹಾಗೂ ಇದು ಅನಲಾಗ್, ಡಿಜಿಟಲ್ ತಂತ್ರಜ್ಞಾನದಲ್ಲಿಯೂ ದೊರೆಯುತ್ತದೆ. ಇದರ ಬೆಲೆ ಐದು ಸಾವಿರದಿಂದ ಎಂಬತ್ತು ಸಾವಿರದವರೆಗೂ ಇದೆ. ಇದು ಉಚಿತವಾಗಿ ಸಿಗುವುದಿಲ್ಲ.

ಹೊರಕಿವಿಯ, ಕಿವಿನಾಳದ ಒಳಗೆ ಇಡುವ ಶ್ರವಣೋಪಕರಣಗಳೂ ಇವೆ.

ಎರಡೂ ಕಿವಿಗಳಿಗೆ ಶ್ರವಣೋಪಕರಣ ಧರಿಸಿದಾಗ -

- ಶಬ್ದ ಯಾವ ದಿಕ್ಕಿನಿಂದ ಬರುತ್ತಿದೆ ಎಂದು ಅರಿವಾಗುತ್ತದೆ.
- ಶಬ್ದದ ಮಟ್ಟ ಜಾಸ್ತಿಯಿರುತ್ತದೆ.
- ಗದ್ದಲದ ವಾತಾವರಣದಲ್ಲಿಯೂ ಮಾತುಗಳು ಚೆನ್ನಾಗಿ ಕೇಳುತ್ತದೆ.



## ಶ್ರವಣದೋಷ ಇರುವ ಮಗು ಇನ್ನೊಬ್ಬರ ಜೊತೆ ಹೇಗೆ ಸಂವಹನ ನಡೆಸುತ್ತದೆ?

ಶ್ರವಣೋಪಕರಣ ಹಾಗೂ ತರಬೇತಿ ಇಲ್ಲದ ಮಗುವು ಸನ್ನೆಗಳ ಮೂಲಕವೇ ಇನ್ನೊಬ್ಬರ ಜೊತೆ ಸಂವಹನ ಮಾಡಲು ಸಾಧ್ಯ. ಆದರೆ, ಇದು ಮುಖಾಮುಖಿ ಆಗಿದ್ದಾಗ ಮಾತ್ರವೇ ಪರಿಣಾಮಕಾರಿ.

## ಕಿವುಡುತನ ಇರುವ ಮಕ್ಕಳು ಸನ್ನೆಯನ್ನು ಸಂವಹನ ಮಾಧ್ಯಮವಾಗಿ ಬಳಸುವುದು ಏಕೆ ಸೂಕ್ತವಲ್ಲ?

ಸನ್ನೆಯ ಮೂಲಕ ಸಂವಹನದ ಅಭ್ಯಾಸ ಮಾಡಿಕೊಂಡರೆ ಮಾತು ಕಲಿಯಲು ಆಸಕ್ತಿ ತೋರದಿರಬಹುದು, ಹೆಚ್ಚಿನ ವಿದ್ಯಾಭ್ಯಾಸಕ್ಕೆ ಇದು ತೊಡಕಾಗಬಹುದು. ಬೇರೆ ಯಾವ ವಿಧಾನಗಳೂ ಫಲಕಾರಿಯಾಗದಿದ್ದಾಗ ಮಾತ್ರ ಸನ್ನೆಯ ಮೂಲಕ ಸಂವಹನಕ್ಕೆ ಅವಕಾಶ ಕೊಡುವುದು ಒಳ್ಳೆಯದು. ಮುಖ್ಯವಾಗಿ ಕೆಲವರೊಡನೆ ಮಾತ್ರ ಈ ರೀತಿ ಸನ್ನೆಗಳ ವಿನಿಮಯ, ಸಂಪರ್ಕ ಸಾಧ್ಯ. ಕಿವುಡುತನ ಇರುವ ಮಗುವು ಶ್ರವಣೋಪಕರಣ ಧರಿಸಿ, ಮಾತುಗಳನ್ನು ಆಲಿಸಿ, ಗ್ರಹಿಸಿ ಮಾತನಾಡುವಂತೆ ಅಭ್ಯಾಸ ಮಾಡುವುದು ಹೆಚ್ಚು ಸೂಕ್ತ.

### ■ ಶ್ರವಣ ದೋಷವಿರುವ ಮಗುವಿಗೆ ಯಾವ ಭಾಷೆಯನ್ನು ಕಲಿಸುವುದು ಸೂಕ್ತ?

ಶ್ರವಣದೋಷವಿರುವ ಮಗುವು ಬೆಳೆಯುವ ಪರಿಸರದಲ್ಲಿ, ಸಾಮಾನ್ಯವಾಗಿ ಅದರ ಕಿವಿಗೆ ಯಾವ ಭಾಷೆಯ ಮಾತುಗಳು ಹೆಚ್ಚಾಗಿ ಬೀಳುತ್ತವೋ, ಆ ಭಾಷೆಯನ್ನು ಅಂದರೆ, ಮನೆಯಲ್ಲಿ ಆಡುವ ಭಾಷೆಯನ್ನು ಅಥವಾ ಮಾತೃ ಭಾಷೆಯನ್ನು ಕಲಿಸುವುದೇ ಸೂಕ್ತ.

### ■ ಇಂತಹ ಮಗುವಿಗೆ ಒಂದಕ್ಕಿಂತ ಹೆಚ್ಚು ಭಾಷೆ ಕಲಿಯಲು ಸಾಧ್ಯವೇ?

ಖಂಡಿತಾ ಸಾಧ್ಯ. ಮಾತೃ ಭಾಷೆಯನ್ನು ಕಲಿತ ಬಳಿಕ ಬೇರೆ ಭಾಷೆಯನ್ನು ಕಲಿಸಿದರೆ ಮಗು ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಒಂದು ಅಥವಾ ಹೆಚ್ಚು ಬೇರೆ ಭಾಷೆಗಳನ್ನು ಕಲಿಯಬಹುದು.

## ಸ್ವ ಪರೀಕ್ಷೆ

## ಶ್ರವಣೋಪಕರಣಗಳು (Hearing aid)

**ಸರಿಯಾಗಿ ಉತ್ತರಿಸಿ.**

1. ಶ್ರವಣೋಪಕರಣ ಎಂದರೆ ಶಬ್ದಗಳನ್ನು ಯಂತ್ರ.
2. ಹೊರಕಿವಿ ಹಾಗೂ ಮಧ್ಯಕಿವಿಯ ತೊಂದರೆಗೆ ಇದೆ.
3. ಒಳಕಿವಿಯ ತೊಂದರೆ ಇದ್ದಲ್ಲಿ ಉಪಯೋಗಿಸಬೇಕು.
4. ಶ್ರವಣೋಪಕರಣ ಕೊಳ್ಳುವ ಮುನ್ನ ಸಲಹೆ ಪಡೆಯಬೇಕು.
5. ಎರಡೂ ಕಿವಿಯಲ್ಲಿ ತೊಂದರೆ ಇದಲ್ಲಿ ಶ್ರವಣೋಪಕರಣವನ್ನು ಕಿವಿಗಳಿಗೆ ಉಪಯೋಗಿಸಬೇಕು.

**ಉತ್ತರಗಳು:**

1. ಜೋರಾಗಿಸುವ
2. ಔಷದೋಪಚಾರ.
3. ಶ್ರವಣೋಪಕರಣ.
4. ಶ್ರವಣ ತಜ್ಞರ.
5. ಎರಡು.

## ಅಧ್ಯಾಯ - 5

# ತರಬೇತಿ, ವಿದ್ಯಾಭ್ಯಾಸ

ಶ್ರವಣದೋಷವಿರುವ ಮಗುವಿಗೆ ಆಲಿಸಿ- ಮಾತನಾಡುವ ವಿಧಾನ ಬಳಸಿ ಮಾತನಾಡಲು ಕಲಿಸಬಹುದು. ಚಿಕ್ಕ ವಯಸ್ಸಿನಲ್ಲೇ ಶ್ರವಣದೋಷ ಗುರುತಿಸಿ, ಶ್ರವಣೋಪಕರಣ ಬಳಸಿ ಈ ವಿಧಾನದ ಮೂಲಕ ತರಬೇತಿ ನೀಡಿದರೆ ಎಲ್ಲ ಮಕ್ಕಳಿಗೂ ಮಾತು ಭಾಷೆ ಕಲಿಸಲು ಸಾಧ್ಯ. ಆದರೆ, ಈ ದೋಷ ಉಂಟಾಗಿ ದೀರ್ಘ ಕಾಲದ ನಂತರ ಈ ತರಬೇತಿ ಹೆಚ್ಚು ಉಪಯೋಗವಾಗುವುದಿಲ್ಲ.

**ಆಲಿಸಿ-ಮಾತನಾಡುವ ತರಬೇತಿ (ಆ-ಮಾತು)**

ಶ್ರವಣದೋಷವಿರುವ ಮಗು ಆರಂಭದಿಂದಲೇ ಶ್ರವಣೋಪಕರಣ ಉಪಯೋಗಿಸಿ, ಕೇವಲ ಮಾತನ್ನು ಕೇವಲ ಮಾತನ್ನು ಕೇಳಿಸಿ ಕೊಂಡು ಮಾತನಾಡಲು ಕಲಿಯುವುದಕ್ಕೆ, ಆ-ಮಾತು ತರಬೇತಿ ಎಂದು ಕರೆಯುತ್ತಾರೆ.

**ಆಲಿಸಿ-ಮಾತುಗಾರಿಕೆ ತರಬೇತಿ (Auditory-verbal therapy) ಯ ಉದ್ದೇಶಗಳು**

1) ಶಬ್ದ ಮತ್ತು ಮಾತುಗಾರಿಕೆಯನ್ನು ಕೇಳಿಸಿಕೊಳ್ಳುವ ಸಾಮರ್ಥ್ಯದ ಅಭಿವೃದ್ಧಿ

2) ಕೇಳಿಸಿಕೊಂಡದ್ದನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯದ ಅಭಿವೃದ್ಧಿ.

3) ಕೇಳಿಸಿಕೊಂಡು ಅರ್ಥೈಸಿ ಕೊಂಡಿದ್ದನ್ನು ಸನ್ನಿವೇಶಕ್ಕನುಗುಣವಾಗಿ ಮಾತಿನ ಮೂಲಕ ಅಭಿವೃದ್ಧಿ ಪಡಿಸುವ ನಿರ್ಣಯ ಸಾಮರ್ಥ್ಯದ ಅಭಿವೃದ್ಧಿ.



**ತರಬೇತಿಯಲ್ಲಿ ಅನುಸರಿಸಬೇಕಾದ ನಿಯಮಗಳು**

1) ಸುಲಭದಿಂದ ಕಷ್ಟದ ವಿಷಯಗಳ ಬಗ್ಗೆ ಹಂತ ಹಂತವಾಗಿ ತರಬೇತಿ ನೀಡಬೇಕು.

2) ನೀಡಲಾಗುವ ತರಬೇತಿ ಪ್ರತಿಯೊಂದು ಮಗುವಿನ ಕಲಿಕೆ ಮತ್ತು ಗ್ರಹಣ ಶಕ್ತಿಯನ್ನು ಅವಲಂಬಿಸಿರಬೇಕು.

3) ತರಬೇತಿ ನೀಡುವ ವಾತಾವರಣ ಹಂತ ಹಂತವಾಗಿ ಕೆಳಕಂಡಂತೆ ಬದಲಾಗಬೇಕು.

ಅ) ಮೊದಲು ನಿಶ್ಶಬ್ದವಾದ ವಾತಾವರಣ

ಆ) ನಂತರ ಸ್ವಲ್ಪ ಗದ್ದಲದ ವಾತಾವರಣ

| ಶಬ್ದ ಕೇಳಿ ಅರಿವು ಮೂಡಿಸುವ ಹಾಗೂ ಉತ್ತೇಜಿಸುವ ಕೆಲವು ಆಟ/ಕ್ರಿಯೆಗಳು | | | |
|---|---|---|---|
| | ಶಬ್ದ | ಆಟ/ಗೊಂಬೆ | ಹಾಡು |
| 1. | ಆ | 'ವಿಮಾನ' ಹಾರುವಾಗ ಇಳಿಯುವಾ<br>ನೋವಿನಿಂದ ಬಳಲುವಾಗ ಮಾಡುವ ಶಬ್ದ.<br>ಬಿಸಿ ವಸ್ತುವನ್ನು ಮುಟ್ಟುವಾಗ ಮಾಡುವ ಶಬ್ದ. | ಈ ಶಬ್ದ/ಆಟಿಕೆಗೆ ಸರಿಹೊಂದುವ |
| 2. | ಊ | ರೈಲುಗಾಡಿ ಓಡಿಸುವಾಗ ಶಬ್ದ<br>ಮಗು ಅಳುವ ಶಬ್ದ. | ಮಕ್ಕಳ ಪದ್ಯ/ ಹಾಡು |
| 3. | ಬ್ ಬ್ ಬಾ | ಬೋಟ್, ಬಸ್<br>ನಾಯಿ / ಮಗು / ಕರೆಯುವುದು. | (Rhymes) ಉಪಯೋಗಿಸುವುದು. |
| 4. | ಬೀಪ್ | ಬಸ್/ಕಾರ್ ಹಾರನ್ | |
| 5. | ಪ್, ಪ್, ಪಿ, | 'ಪಾಪು' ' / ' ಪಾಪ' ಕರೆಯುವುದು.<br>ಕಾರು / ಜೀಪ್ ಹಾರನ್ ಶಬ್ದ. | |
| 6. | ಟ, ಟ | ಗಡಿಯಾರದ ಟಿಕ್, ಟಿಕ್ ಶಬ್ದ, ಟಾ ಟಾ<br>ನೀರು ಬೀಳುವಾಗ 'ಟಪ್, ಟಪ್' ಅನ್ನುವ ಶಬ್ದ.<br>'ಟಕ್' ಕುದುರೆ ಹೋಗುವ ಶಬ್ದ. | |
| 7. | ಔ | ಬಿದ್ದಾಗ ಮಾಡುವ ಶಬ್ದ | |
| 8. | ವಾಹ್ | ಆಶ್ಚರ್ಯ ವ್ಯಕ್ತಪಡಿಸುವ ಹಾಗೆ | |
| 9. | ಹಾ, ಹಾ | ನಗುವಾಗ ಆಗುವ ಶಬ್ದ | |
| 10. | ಗ್, ಗ್ | ಗಾಡಿ | |
| 11. | ಮ್ | ಅಮ್ಮ, ಮಿಯಾಂವ್ | |
| 12. | ರ್ | ಗಾಡಿ ಓಡಿಸುವ ಶಬ್ದ | |
| 13. | ಕ್ | ಕಾರು<br>'ಅಕ್ಕ', 'ಕಾಕಾ' ಎಂದು ಕರೆಯುವುದು, | |
| 14. | ನ | ನಾಯಿ | |
| 15. | ಸ್ | ಹಾವಿನ ಬುಸುಗುಟ್ಟುವಿಕೆ, ಸ್ಪೂನ್<br>ಮಗು ಮಲಗಿಸುವಾಗ,<br>ಮಗು ಸುಮ್ಮನಿರಿಸಲು ಮಾಡುವ ಶಬ್ದ. | |
| 16. | ಶ್ | ಸುಮ್ಮನಿರುವಂತೆ ಮಾಡುವುದು. | |
| 17. | ಲ | ಲಾರಿ<br>ಲ....ಲ......ಲ .... ಹಾಡುವಾಗ. | |
| 18. | ಚ | ಚಪಾತಿ ಮಾಡುವಾಗ, ಬೆಂಡು. |  |

| | | | |
|---|---|---|---|
| 19. | ಈ | ಹಲ್ಲು ಉಜ್ಜುವಾಗ ಹೊರಡುವ ಶಬ್ದ.<br>ಹಾರುವ ಹುಳು ಮಾಡುವ ಶಬ್ದ.<br>ಕೊಳಕಾದ ಚಪ್ಪಲಿ ಮುಟ್ಟುವಾಗ ಮಾಡುವ ಶಬ್ದ. | |
| 20. | ಒ | ಮರೆತು ಹೋಗುವಾಗ ಮಾಡುವ ಶಬ್ದ | |
| 21. | ತ | ನೃತ್ಯ ಮಾಡುವಾಗ ತಾ.... ತೈ...<br>ತಾತಾ ಕರೆಯುವಾಗೆ | |
| 22. | ಮ | 'ಮ್' ಎಂದು ಒಳ್ಳೆ ರುಚಿಯನ್ನು ಸವಿಯುವಾಗ ಮಾಡುವ ಶಬ್ದ.<br>ಏನೊ ಯೋಚನೆ ಮಾಡುವಾಗ ಮಾಡುವ ಶಬ್ದ.<br>'ಮೇ' ಎಂದು ಆಡು / ಕುರಿ ಮಾಡುವ ಶಬ್ದ.<br>!ಅಂಬಾ' - ಹಸು, 'ಮಿಯಾಂವ್' - ಬೆಕ್ಕು ಮಾಡುವ ಶಬ್ದ. | |
| 23. | ಡ | ತಮಟೆ ಬಡಿಯುವಾಗ ಬರುವ ಶಬ್ದ.<br>ಡೊರ್ ಬೆಲ್ ಮಾಡಿದಾಗ ಬರುವ ಶಬ್ದ. (ಡಿಂಗ್ ಡಾಂಗ್) | |
| 24. | ನ | ನ....ನ.....ನ.... ಹಾಡುವಾಗ. | |

**ಭಾಷಾ ಅಭಿವೃದ್ಧಿಗೆ ಕೆಲವು ಚಟುವಟಿಕೆಗಳು.**

ನ್ಯೂನತೆಯುಳ್ಳ ಮಗುವಿನ ಭಾಷಾ ಅಭಿವ್ಯಕ್ತಿಯ ಅಭಿವೃದ್ಧಿಗೆ ಕೆಳಕಂಡ ಚಟುವಟಿಕೆಗಳನ್ನು ಸೂಚಿಸಲಾಗಿದೆ. ಈ ಚಟುವಟಿಕೆಗಳೊಂದಿಗೆ ಮಾತು ಹಾಗೂ ಭಾಷೆ ಉಪಯೋಗಿಸಿ, ಮಕ್ಕಳು ಅದನ್ನು ಅನುಸರಿಸುವುದಕ್ಕೆ ಉತ್ತೇಜಿಸಬೇಕು.

1. ಬಲೂನುಗಳನ್ನು ಊದುವುದು, ಸಿಳ್ಳೆಗಳನ್ನು ಹಾಕುವುದು, ಮೇಣದ ಬತ್ತಿಯನ್ನು ಬಾಯಿಂದ ಊದಿ ಆರಿಸುವುದು.
2. ಸೋಪಿನ ನೀರನ್ನು ಕೊಳವೆಗಳ ಮೂಲಕ ಊದಿ ನೊರೆಗುಳ್ಳೆ ಬರಿಸುವುದು.
3. ಕುರ್ಚಿ, ಮೇಜುಗಳಿಂದ ವೃತ್ತದ ಒಳಗೆ ಮತ್ತು ಹೊರಗೆ ನೆಗೆಯುವುದು.
4. ಹಲ್ಲು ಉಜ್ಜುವುದು, ತಲೆ ಕೂದಲು ಬಾಚುವುದು.
5. ನೆಲಹಾಸನ್ನು ಸ್ವಚ್ಛಗೊಳಿಸುವುದು.
6. ಬೂಟು-ಪಾದರಕ್ಷೆಗಳಿಗೆ ಪಾಲಿಷ್ ಮಾಡುವುದು.
7. ಕಳ್ಳ-ಪೋಲೀಸ್ ಆಟಗಳು.
8. 'ಯಾವ ಹಸ್ತ' ಆಟಗಳು
9. ಆಯಸ್ಕಾಂತ ದೊಂದಿಗೆ ಆಟಗಳು
10. ಭೂತಗನ್ನಡಿಯೊಂದಿಗೆ ಆಟಗಳು
11. ದೂರದರ್ಶಕದೊಂದಿಗೆ ಆಟಗಳು

12. ಪ್ರಾಣಿ ರೂಪದ ಆಟಿಕೆಗಳೊಂದಿಗೆ ಆಡುವುದು.
13. ವಾಹನಗಳ ರೂಪದ ಆಟಿಕೆಗಳೊಂದಿಗೆ ಆಡುವುದು.
14. ಮನೆಯ ರೂಪದ ಆಟಿಕೆಗಳೊಂದಿಗೆ ಆಡುವಿಕೆ.
15. ಚೆಂಡಿನೊಂದಿಗೆ ಆಟ.
16. ಚಹಾ ಸೆಟ್ ರೂಪದ ಆಟಿಕೆಗಳೊಂದಿಗೆ ಆಡುವುದು
17. ವರ್ಣಾಕ್ಷರದ ಆಟಿಕೆಗಳೊಂದಿಗೆ ಆಡುವುದು.
18. ಚೌಕಾಕೃತಿಯ ಮರದ ಆಟಿಕೆಗಳೊಂದಿಗೆ ಆಡುವುದು.
19. ಪಟ್ಟಿಗಳೊಂದಿಗೆ ಆಡುವಿಕೆ.
20. ಪೆಪ್ಪರ್‌ಮೆಂಟ್, ಜೆಮ್ಸ್‌ಗಳೊಂದಿಗೆ ಆಡುವಿಕೆ.
21. ಬೊಂಬೆಗಳೊಂದಿಗೆ ಆಡುವಿಕೆ.
22. ಮನೆಯೊಳಗೆ ಆಡುವಿಕೆ.
23. ಬೊಂಬೆಯ ಬಟ್ಟೆಗಳನ್ನು ಸ್ವಚ್ಚಗೊಳಿಸುವ ಆಟ.
24. ಬೊಂಬೆಯ ಬಟ್ಟೆಗಳನ್ನು 'ಇಸ್ತ್ರೀ' ಮಾಡುವ ಆಟ.
25. ಬೊಂಬೆಗಳಿಗೆ ಸ್ನಾನ ಮಾಡಿಸುವ ಆಟ.
26. ಬೊಂಬೆಗಳಿಗೆ ಬಟ್ಟೆ ತೊಡಿಸುವ ಆಟ.
27. ಪಾತ್ರೆ ತೊಳೆಯುವ ಆಟ
28. ಜೇಡಿ ಮಣ್ಣಿನೊಂದಿಗೆ ಆಟ.
29. ಹಾರ್ಮೋನಿಯಂನೊಂದಿಗೆ ಆಟ.
30. ಆಲಿಸುವ ತರಬೇತಿಯೊಂದಿಗೆ 'ಸಂಗೀತ ಕುರ್ಚಿ' ಆಟ (Musical Chairs).
31. ನೀರನ್ನು ತುಂಬುವ ಆಟ - ಅರ್ಧ ತುಂಬುವ ಆಟ, ಪೂರ್ತಿ ತುಂಬುವ ಆಟ, ಖಾಲಿ ಮಾಡುವ ಆಟ, ನೀರು ಚೆಲ್ಲುವ ಆಟ.
32. ನೀರಿಗೆ ಬಣ್ಣ ಬೆರೆಸುವ ಆಟ.
33. ಬೇರೆ ಬೇರೆ ಬಣ್ಣದ ಪಾನಕಗಳನ್ನು ತಯಾರಿಸುವ ಆಟ.

### ಶ್ರವಣದೋಷವಿರುವ ಮಗುವಿಗೆ ಸಾಮಾನ್ಯ ಶಾಲೆಯಲ್ಲಿ ವಿದ್ಯಾಭ್ಯಾಸ ಸಾಧ್ಯ.

ಚಿಕ್ಕ ವಯಸ್ಸಿನಲ್ಲಿಯೇ ಶ್ರವಣದೋಷ ಗುರುತಿಸಿ ಸರಿಯಾದ ಶ್ರವಣೋಪಕರಣ ಬಳಸಿ, ತರಬೇತಿ ಕೊಟ್ಟರೆ ಎಲ್ಲ ಮಕ್ಕಳಂತೆ ವಿದ್ಯಾಭ್ಯಾಸ ಪಡೆಯಲು ಅವರಿಗೆ ಏನೂ ತೊಂದರೆಯಾಗದು. ಇತರ ಮಕ್ಕಳ ಜೊತೆ ಇಂತಹ ಮಗು ಬೆರೆಯುವುದು ಅಗತ್ಯ ಕೂಡ. ಹೀಗೆ ಇತರ ಮಕ್ಕಳ ಜೊತೆ ಬೆರೆಯುವುದರಿಂದ ಮಗು ಮಾನಸಿಕವಾಗಿ ಸದೃಢನಾಗುತ್ತದೆ. ಹಿಂಜರಿಕೆ,

ಕೀಳರಿಮೆ, ಒಂಟಿತನಗಳಿಂದ ದೂರವಾಗಿ, ಆತ್ಮೀಯ ವಾತಾವರಣ ನಿರ್ಮಾಣವಾಗುತ್ತದೆ. ಆದರೆ ಇವೆಲ್ಲಕ್ಕೂ ಶಿಕ್ಷಕರ ಹಾಗೂ ಸಹಪಾಠಿಗಳ ಸಹಕಾರ ಬಹಳ ಮುಖ್ಯ.

**ಇಂತಹ ಮಗುವಿನ ಶಿಕ್ಷಣದಲ್ಲಿ ಮನೆಯ ಪಾತ್ರ.**

- ತಂದೆ, ತಾಯಿ, ಮತ್ತು ಮನೆಯಲ್ಲಿರುವ ಇತರ ಬಂಧುಗಳು ಆ ಮಗುವನ್ನು ಬೇರೆಯಾಗಿ ಕಾಣಬಾರದು.
- ಮಗುವಿಗೆ ಕನಿಕರ ತೋರುವ ಬದಲು ಧೈರ್ಯ, ಆತ್ಮ ವಿಶ್ವಾಸ ತುಂಬಿಸಲು ನೆರವಾಗಬೇಕು.
- ಮಗುವಿನ ಸೃಜನಶೀಲತೆಗೆ ಉತ್ತೇಜನ ಕೊಡಬೇಕು.
- ಮಗುವಿನ ಆಸಕ್ತಿಯನ್ನು ಗುರುತಿಸಿ ಅದನ್ನು ಪ್ರೋತ್ಸಾಹಿಸಬೇಕು.

**ಶಾಲಾ ಪೂರ್ವ ತರಬೇತಿ.**

ಶಾಲಾ ವಯಸ್ಸಿನ ಮಕ್ಕಳು ಮಾಡುವಂತಹ ಕ್ರಿಯೆ, ಸಾಮರ್ಥ್ಯಗಳನ್ನು ಈ ಶಾಲಾ ಪೂರ್ವ ತರಬೇತಿಯಲ್ಲಿ ಕಲಿಸಿಕೊಡಲಾಗುತ್ತದೆ. ಈ ಸಾಮರ್ಥ್ಯಗಳಾವುದೆಂದರೆ -

ಅ) **ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳುವುದು** (ತಿನ್ನುವುದು, ಬಟ್ಟೆ ಧರಿಸುವುದು ಇತ್ಯಾದಿ) - ಈ ಯಾವುದೇ ಕ್ರಿಯೆಯನ್ನು ಸಣ್ಣ-ಸಣ್ಣ ಹಂತಗಳಲ್ಲಿ ಸುಲಭವಾದ ರೀತಿಯಲ್ಲಿ ತರಬೇತಿಯ ಮೂಲಕ ಕಲಿಸಲಾಗುತ್ತದೆ. ಇದೆ ರೀತಿ ತರಬೇತಿಯನ್ನು ಈ ಕೆಳಗಿನ ಚಟುವಟಿಕೆಗಳ ಬೆಳವಣಿಗೆಗೆ ಕೂಡಲಾಗುತ್ತದೆ.

ಆ) **ಸಾಮಾಜಿಕ ಚಟುವಟಿಕೆ** (ಪರಿಚಯಸ್ತರನ್ನು ಕಂಡರೆ ನಗುವುದು, ನಮಸ್ಕಾರ ಎನ್ನುವುದು, ಮಾತನಾಡುವವರ ಮುಖ ನೋಡಿ ಮಾತನಾಡುವುದು, ಇತ್ಯಾದಿ).

ಇ) **ಚಲನಾ ಸಾಮರ್ಥ್ಯ** (Motor skills) ಕತ್ತಿನ ನಿಯಂತ್ರಣ, ಮಗಚುವುದು, ಕೂರುವುದು, ನಿಲ್ಲುವುದು, ಕೈಗೆ ಏನಾದರೂ ಕೊಟ್ಟಲ್ಲಿ ಹಿಡಿದುಕೊಳ್ಳುವುದು, ಇತ್ಯಾದಿ.

ಈ) **ಮಾತು- ಭಾಷಾ ಸಾಮರ್ಥ್ಯ:-** ಮಾತನ್ನು ಕೇಳಿಸಿಕೊಳ್ಳುವುದು,ಅರ್ಥಮಾಡಿಕೊಳ್ಳುವುದು, ಮತ್ತು ಸಂದರ್ಭಕ್ಕೆ ಸರಿಯಾಗಿ ಮಾತನಾಡುವುದು ಈ ರೀತಿ ಮಗುವಿನ ಸಾಮಾನ್ಯ ಬೆಳವಣಿಗೆಯಲ್ಲಿ ತರಬೇತಿಯನ್ನು ಶಾಲಾ ಪೂರ್ವ ತರಬೇತಿಯಲ್ಲಿ ನೀಡಲಾಗುವುದು.

ಸ್ವ ಪರೀಕ್ಷೆ

# ತರಬೇತಿ, ವಿದ್ಯಾಭ್ಯಾಸ

**ಸರಿಯಾಗಿ ಉತ್ತರಿಸಿ.**

1. ಶ್ರವಣದೋಷವಿರುವ ಮಗುವಿಗೆಮಾತು-ಭಾಷೆ ಕಲಿಸಲು ______________ ತರಬೇತಿ ಕೊಡಬೇಕು.
2. ಕೇಳುವ ತರಬೇತಿಯ ಹಂತಗಳು ______________ ______________ ______________ ______________ ಮತ್ತು______________
3. ಶಾಲಾ ಪೂರ್ವ ತರಬೇತಿಯಲ್ಲಿ ______________ ______________ ______________ ಮತ್ತು ______________ ಸಾಮರ್ಥ್ಯಗಳನ್ನು ವೃದ್ಧಿಸಲಾಗುತ್ತದೆ.
4. ಕಿವುಡು ಮಗುವಿಗೆ ತರಬೇತಿ ಕೊಟ್ಟಲ್ಲಿ ಶಾಲೆಗಳಲ್ಲಿ ______________ ವಿದ್ಯಾಭ್ಯಾಸ ಮಾಡಬಹುದು.

**ಉತ್ತರಗಳು.**

1. ಆಲಿಸಿ - ಮಾತುಗಾರಿಕೆ ತರಬೇತಿ.
2. ಶಬ್ದದ ಅರಿಯುವಿಕೆ, ಶಬ್ದಕ್ಕೆ ಅರ್ಥದ ಜೋಡಣೆ, ಅನುಕರಣೆ ಮತ್ತು ವಿಸ್ತರಣೆ, ಮಾತಿನ ಮೂಲಕ ಭಾಷೆಯ ಅಭಿವ್ಯಕ್ತಿ ಮತ್ತು ಮುಂದುವರೆದ ಆಲಿಸುವ ಕುಶಲತೆ.
3. ತನ್ನ ಕೆಲಸ ತಾನೆ ಮಾಡುವ, ಸಾಮಾಜಿಕ ಚಟುವಟಿಕೆ, ಚಲನಾ ಸಾಮರ್ಥ್ಯ ಮತ್ತು ಮಾತು-ಭಾಷಾ ಸಾಮರ್ಥ್ಯ.
4. ಸಾಮಾನ್ಯ.

# ಅಧ್ಯಾಯ - 6

## ಶ್ರವಣದೋಷ ಉಳ್ಳವರಿಗೆ ಸರಕಾರಿ ಸೌಲಭ್ಯಗಳು

### ಶ್ರವಣದೋಷ ಇರುವ ಮಗು ಬಗ್ಗೆ ಸರಕಾರದಿಂದ ಸಿಗುವ ಶೈಕ್ಷಣಿಕ ಸೌಲಭ್ಯಗಳು.

- ಕಿವಿ ತೊಂದರೆ ಇರುವ ಪ್ರತಿಯೊಬ್ಬ ಮಗುವಿಗೂ ವಿದ್ಯಾಭ್ಯಾಸ ಕಲ್ಪಿಸಿ ಕೊಡುವ ಅವಕಾಶ.
- ವಿಧ್ಯಾಭ್ಯಾಸವನ್ನು ಸಾಮಾನ್ಯ ಮಕ್ಕಳ ಶಾಲೆಯಲ್ಲಿ ಮಾಡಬಹುದಾಂತಹ ಅವಕಾಶ.
- ವೃತ್ತಿಪರ ತರಬೇತಿ ಅವಕಾಶ.
- ಮುಕ್ತ ಶಾಲಾ ಕಾಲೇಜಿನಲ್ಲಿ ವಿಧ್ಯಾಭ್ಯಾಸಕ್ಕೆ ಬೇಕಾಗುವ ಪುಸ್ತಕ ಸಮವಸ್ತ್ರ(Uniform) ಮುಂತಾದ ಸಲಕರಣೆಗಳನ್ನು ಉಚಿತವಾಗಿ ನೀಡಲಾಗುವ ಅವಕಾಶ
- ಶಾಲಾ / ಕಾಲೇಜುಗಳ ಕಟ್ಟಡಗಳನ್ನು ಶ್ರವಣದೋಷವಿರುವ ಮಗುವಿಗೆ ಅನುಕೂಲವಾಗುವ ರೀತಿಯಲ್ಲಿ ಕಟ್ಟಬೇಕು.
- ಮಗುವು ಶಾಲಾ/ಕಾಲೇಜಿಗೆ ಹೋಗಿ ಬರಲು ಅನುಕೂಲತೆ.
- ವಿದ್ಯಾರ್ಥಿವೇತನ (Scholarship) ದೊರೆಯುವುದು.
- ಒಂದೇ ಭಾಷೆಯ ಕಲಿಕೆ, 2ನೇ ಹಾಗೂ 3ನೇ ಭಾಷಾ ಕಲಿಕೆಯಿಂದ ರಿಯಾಯಿತಿ.

### ಶ್ರವಣದೋಷ ಇರುವವರಿಗೆ ಉದ್ಯೋಗ ನೀಡುವಲ್ಲಿ ಸರಕಾರದ ಪಾತ್ರ.

- ಶೇಖಡ 1% ರಷ್ಟು ಸರ್ಕಾರಿ ಉದ್ಯೋಗವನ್ನು ಶ್ರವಣದೋಷವಿರುವವರಿಗೆ ಮೀಸಲಾಗಿಡಲಾಗಿದೆ.
- ಶ್ರವಣದೋಷವಿರುವ ಕಾರಣದಿಂದ ವೃತ್ತಿಯಲ್ಲಿ ಮೇಲಿನ ದರ್ಜೆಗೆ ಪ್ರಮೋಷನ್ ನಿರಾಕರಿಸದಿರುವುದು.
- ವಿಶೇಷ ಉದ್ಯೋಗ ವಿನಿಮಯ ಕೇಂದ್ರ.

### ಇಂತಹ ವ್ಯಕ್ತಿಗಳಿಗೆ ಇರುವ ಸರಕಾರಿ ರಿಯಾಯಿತಿಗಳು.

- ರೈಲಿನ ಎಲ್ಲಾ ದರ್ಜೆಯ ದರದಲ್ಲಿ ಶೇಕಡಾ 75 ರಷ್ಟು, ರಿಯಾಯಿತಿ, ಸೀಸನ್ ಟಿಕೆಟ್‌ನಲ್ಲಿ ಶೇಕಡಾ 50ರಷ್ಟು ರಿಯಾಯಿತಿ, ಮಗುವಿನ ಜೊತೆಗೆ ಒಬ್ಬ ವಯಸ್ಕರಿಗೂ ಈ ರಿಯಾಯಿತಿ ಅನ್ವಯ

- ವರಮಾನ ತೆರಿಗೆಯಲ್ಲಿ ರಿಯಾಯಿತಿ.
- ಬ್ಯಾಂಕ್ ಸಾಲಗಳನ್ನು ಕಡಿಮೆ ಬಡ್ಡಿ ದರದಲ್ಲಿ ಪಡೆಯಬಹುದು.

**ಸರಕಾರ ಶ್ರವಣದೋಷ ಇರುವವರಿಗೆ ನೀಡುವ ಇತರ ಸೌಲಭ್ಯಗಳು.**

- ರೂ 100/- ಮಾಸಿಕ ವೇತನ
- ಮಾಸಿಕ ಆದಾಯ Rs. 6500/- ಕ್ಕಿಂತಲೂ ಕಡಿಮೆ ಇದ್ದಲ್ಲಿ, ಜೇಬಿನಲ್ಲಿಡಬಹುದಾದಂತಹ ಶ್ರವಣೋಪಕರಣವನ್ನು ಉಚಿತವಾಗಿ ಪಡೆಯಬಹುದು. ಮಾಸಿಕ ಆದಾಯ Rs. 6501/-ರಿಂದ Rs. 10000/-ಒಳಗೆ ಇದ್ದಲ್ಲಿ ಈ ಶ್ರವಣೋಪಕರಣವನ್ನು ಶೇಕಡಾ 50% ರಿಯಾಯಿತಿ ದರದಲ್ಲಿ ಪಡೆಯಬಹುದು.
- ಈ ಎಲ್ಲಾ ಸವಲತ್ತುಗಳನ್ನು ಪಡೆಯಲು ಶ್ರವಣತಜ್ಞರಿಂದ ಶ್ರವಣದೋಷ (60 dB HL ಗಿಂತ ಹೆಚ್ಚು) ವನ್ನು ದೃಢೀಕರಿಸುವ ಪ್ರಮಾಣ ಪತ್ರ (Certificate) ಇರಬೇಕು.

ಶ್ರವಣ ದೋಷವುಳ್ಳವರು ಚಿಕ್ಕ ವಯಸ್ಸಿನಿಂದಲೇ ಸರಿಯಾದ ಉಪಕರಣ ಬಳಸಿ ತರಬೇತಿ ಹೊಂದಿದ್ದರೆ, ಒಳ್ಳೆಯ ಶಿಕ್ಷಣ ಹಾಗೂ ಒಳ್ಳೆಯ ಕೆಲಸ ದೊರಕುತ್ತದೆ. ಹಾಗೂ ಇವರು ನಿಷ್ಠೆಯಿಂದ ಕೆಲಸ ಮಾಡಿರುವುದರಿಂದ ಇವರ ಕಾರ್ಯ ದಕ್ಷತೆಯನ್ನು ಮೆಚ್ಚಿರುವ ಹಲವಾರು ಉದಾಹರಣೆಗಳು ಇವೆ.

ಕಿವುಡುತನವನ್ನು ಆರಂಭದಲ್ಲಿಯೇ ಗುರುತಿಸಿ, ಶ್ರವಣೋಪಕರಣ ಬಳಸಿ, ಸರಿಯಾದ ಅಭ್ಯಾಸ ಮಾಡಿದರೆ ಇತರ ಎಲ್ಲರಂತೆ, ಕೆಲವೊಮ್ಮೆ ಇತರರಿಗಿಂತ ಹೆಚ್ಚು ಬುದ್ಧಿ ಶಕ್ತಿ ತೋರುತ್ತಾರೆ.

## ಸ್ವ ಪರೀಕ್ಷೆ

## ಶ್ರವಣದೋಷ ಉಳ್ಳವರಿಗೆ ಸರಕಾರಿ ಸೌಲಭ್ಯಗಳು

ಸರಿಯಾಗಿ ಉತ್ತರಿಸಿ.

1. ಕ್ಕಿವುಡು ಇರುವ ಮಗುವಿಗೆ ಶಾಲೆಯಲ್ಲಿ ______________ ಹಾಗೂ ______________ ಭಾಷಾ ಕಲಿಕೆಯಿಂದ ರಿಯಾಯಿತಿ ದೊರೆಯುವುದು.
2. ______________ ಇಡುವ ಶ್ರವಣೋಪಕರಣ ರೂ. 6,500/-ಕ್ಕಿಂತ ಕಡಿಮೆ ಆದಾಯ ಉಳ್ಳವರಿಗೆ ಉಚಿತವಾಗಿ ದೊರೆಯುವುದು.
3. ಕಿವುಡುತನ ಇರುವವರು ಉದ್ಯೋಗಕ್ಕಾಗಿ ______________ ಕೇಂದ್ರಗಳಲ್ಲಿ ಹೆಸರನ್ನು ನೊಂದಾಯಿಸಬೇಕು.

ಉತ್ತರಗಳು.

1. 2ನೇ ಹಾಗೂ 3ನೇ.
2. ಕಿಸೆಯಲ್ಲಿಡುವ.
3. ವಿಶೇಷ ಉದ್ಯೋಗ ವಿನಿಮಯ ಕೇಂದ್ರ.

ಶ್ರವಣೋಪಕರಣ ಹಾಗೂ ಅದರ ಬಳಕೆಯ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಗಾಗಿ ಇಲ್ಲಿ ಕೊಟ್ಟಿರುವ ಅನುಬಂಧಗಳನ್ನು ಓದಿ ತಿಳಿಯಿರಿ:

ಅನುಬಂಧ **1.** ಶ್ರವಣೋಪಕರಣದ ಬಗ್ಗೆ ಮಾಹಿತಿ.
ಅನುಬಂಧ **2.** ಶ್ರವಣೋಪಕರಣವನ್ನು ಬಳಸುವವರಿಗೆ ಕೆಲವು ಸಲಹೆಗಳು.
ಅನುಬಂಧ **3.** ಶ್ರವಣೋಪಕರಣದ ರಕ್ಷಣೆ.
ಅನುಬಂಧ **4.** ಶ್ರವಣೋಪಕರಣಕ್ಕೆ ಹೊಂದಿಕೊಳ್ಳುವುದು.
ಅನುಬಂಧ **5.** ಶ್ರವಣೋಪಕರಣದ ತೊಂದರೆಗಳನ್ನು ಗುರುತಿಸಿ ನಿವಾರಿಸಿಕೊಳ್ಳುವುದು.
ಅನುಬಂಧ **6.** ತರಗತಿಯಲ್ಲಿ ಶ್ರವಣಶಕ್ತಿಯ ತೊಂದರೆಯಿರುವ ಮಗು; ಉಪಾಧ್ಯಾಯರಿಗೆ ಸಲಹೆ ಸೂಚನೆಗಳು.

ಅನುಬಂಧ 1.

## ಶ್ರವಣೋಪಕರಣದ ಬಗ್ಗೆ ಮಾಹಿತಿ

ಉಪಯೋಗಿಸುವವರ ಹೆಸರು:

ಕ್ರಮ ಸಂಖ್ಯೆ: ವಯಸ್ಸು : ಗಂ / ಹೆಂ.

ತಜ್ಞರ ಸಲಹಾ ಚೀಟಿ ಸಂಖ್ಯೆ:

ಶ್ರವಣೋಪಕರಣ ಪಡೆದ ದಿನಾಂಕ:

ಶ್ರವಣೋಪಕರಣವನ್ನು ................................................ ಉಪಯೋಗಿಸಿ.

1. ಬಲಕಿವಿಗೆ
2. ಎಡಕಿವಿಗೆ
3. ಬಲ ಅಥವಾ ಎಡಕಿವಿಗೆ
4. ಬಲ ಮತ್ತು ಎಡಕಿವಿಗೆ (ಎರಡೂ ಕಿವಿಗಳಿಗೆ)

ಶ್ರವಣೋಪಕರಣಗಳಲ್ಲಿ ಹಲವು ವಿಧಗಳಿವೆ. ನಿಮ್ಮ ಉಪಕರಣದ ಮಾದರಿಯ ಬಗ್ಗೆ ತಿಳಿದುಕೊಳ್ಳಿ.

ಕಿಸೆಯಲ್ಲಿ ಇಡುವುದು



ಕಿವಿಯ ಹಿಂಭಾಗದಲ್ಲಿ ಧರಿಸುವುದು





ಕನ್ನಡಕದ ಮಾದರಿ



ಕಿವಿಯ ಒಳಗಡೆ ಧರಿಸುವುದು

ನಿಮ್ಮ ಉಪಕರಣದ ಹೆಸರು..................................................

ನಿಮ್ಮ ಉಪಕರಣದ ಕ್ರಮ ಸಂಖ್ಯೆ...........................................

ಕ್ರಮ ಸಂಖ್ಯೆಯಿಂದ ಅದನ್ನು ಅದೇ ಮಾದರಿಯ ಬೇರೆ ಉಪಕರಣಗಳ ನಡುವೆಯೂ ಗುರುತಿಸಬಹುದು.



ಶ್ರವಣೋಪಕರಣದ ಮಾದರಿ, ಹೆಸರು ಮತ್ತು ಕ್ರಮ ಸಂಖ್ಯೆಗಳನ್ನು ತಿಳಿದುಕೊಳ್ಳುವುದರಿಂದ ಕನಿಷ್ಠ ನಾಲ್ಕು ಉಪಯೋಗಗಳಿವೆ.

1. ನಿಮ್ಮ ಶ್ರವಣೋಪಕರಣ ಕಳೆದು ಹೋದಲ್ಲಿ ಅಥವಾ ಕಳ್ಳತನವಾದಲ್ಲಿ ಅದರ ಬಗ್ಗೆ ಸರಿಯಾದ ಮಾಹಿತಿಯನ್ನು ಕೊಡಬಹುದು.
2. ರಿಪೇರಿಯಾದ ನಂತರ ನಿಮ್ಮ ಶ್ರವಣೋಪಕರಣವನ್ನೇ (ಅಂದರೆ ಸರಿಯಾದ ಶ್ರವಣೋಪಕರಣವನ್ನೇ) ಪಡೆಯಬಹುದು.
3. ಒಂದೇ ಕುಟುಂಬದಲ್ಲಿ ಒಂದೇ ಮಾದರಿಯ ಎರಡು ಮೂರು ಶ್ರವಣೋಪಕರಣ ಇದ್ದಲ್ಲಿ ನಿಮ್ಮದನ್ನು ಗುರುತಿಸಲು ಸಾಧ್ಯ.
4. ಶ್ರವಣ ತಜ್ಞರು ನಿಮ್ಮ ಶ್ರವಣೋಪಕರಣದ ಬಗ್ಗೆ ವಿಚಾರಿಸಿದಾಗ ಸರಿಯಾದ ವಿವರಗಳನ್ನು ಕೊಡಬಹುದು.

ಶ್ರವಣೋಪಕರಣದ ಬೇರೆ ಬೇರೆ ಭಾಗಗಳನ್ನು ಗುರುತಿಸಿ.



1. ಆನ್ / ಆಫ್ ಸ್ವಿಚ್
2. ಮೈಕ್
3. ಶಬ್ದ ಮಟ್ಟ ನಿಯಂತ್ರಣ
4. ಬ್ಯಾಟರಿಯನ್ನು ಇಡುವ ಜಾಗ
5. ಪ್ಲಗ್
6. ತಂತಿಯ ಸುರುಳಿ (ವೈಯರ್)
7. ರಿಸೀವರ್ (ಕಿವಿಬೊಟ್ಟು)
8. ಕಿವಿ ಅಚ್ಚು

ಶಬ್ದ ಮಟ್ಟ ನಿಯಂತ್ರಕವನ್ನು............................................ ಮಟ್ಟದಲ್ಲಿ ಇಡಬೇಕು.

ಸ್ವರ ಮಟ್ಟ ನಿಯಂತ್ರಕವನ್ನು............................................ ಮಟ್ಟದಲ್ಲಿ ಇಡಬೇಕು.

**ಭಾಗಗಳು :**

ನಿಮ್ಮ ಶ್ರವಣೋಪಕರಣಕ್ಕೆ ಬೇಕಾಗಬಹುದಾದ ಬಿಡಿ ಭಾಗಗಳು.

1) ವಯರ್ (Cord)

ಅ) 'ಸಿಂಗಲ್' ವಯರು/'ವಿ' ವಯರು/'ವೈ' ವಯರು

ಆ) ಎರಡು ಪಿನ್ನು → ← ಮೂರು ಪಿನ್ನು

2) ಸೆಲ್ (ಬ್ಯಾಟರಿ) - ಪೆನ್ ಟಾರ್ಚ್ ಸೆಲ್.



ಪೆನ್ ಟಾರ್ಚ್ ಸೆಲ್

ವೋಲ್ಟೇಜ್ : 1.5 ವೋಲ್ಟ್

ಸೆಲ್‌ನ ಹೆಸರು...................................

3) ರಿಸೀವರ್



ಏರ್ ಕಂಡಕ್ಷನ್ ರಿಸೀವರ್



ಬೋನ್ ಕಂಡಕ್ಷನ್ ರಿಸೀವರ್

ಅ. ನಿಮ್ಮ ರಿಸೀವರಿನ ಮಾದರಿ:

ಆ. ಅದರ ಹೆಸರು ಮತ್ತು ಗುರುತು:

(ರಿಸೀವರಿನ ವಿವರಗಳು ಇದ್ದಲ್ಲಿ ಅದನ್ನು ಮತ್ತೆ ಖರೀದಿಸುವಾಗ ಅಥವಾ ರಿಪೇರಿಯಿಂದ ಹಿಂತೆಗೆದುಕೊಳ್ಳುವಾಗ ಪರೀಕ್ಷಿಸಿಕೊಳ್ಳಲು ಸಾಧ್ಯ.)

ರಿಸೀವರನ್ನು ಬದಲಾಯಿಸುವಾಗ ಸರಿಯಾದುದನ್ನು ಬಳಸದಿದ್ದಲ್ಲಿ ಮಾತು ಸ್ಪಷ್ಟವಾಗಿ ಕೇಳದೆ ಇರಬಹುದು.

ನಿಮಗೆ ಅಗತ್ಯವಿದ್ದಾಗ ಅದೇ ಮಾದರಿಯ ಬಿಡಿ ಭಾಗಗಳನ್ನು ಕೊಂಡುಕೊಳ್ಳಬಹುದು.

| |
|---|
| ಯಾವಾಗಲೂ ಒಂದು ಹೊಸ ವಯರ್ ಮತ್ತು ಸೆಲ್ಲನ್ನು ಇಟ್ಟುಕೊಳ್ಳಿ. |
| ಶ್ರವಣೋಪಕರಣವನ್ನು ಉಪಯೋಗಿಸದಿರುವಾಗ 'ಆಫ್' ಮಾಡಿ, ಬ್ಯಾಟರಿಯನ್ನು ಹೊರ ತೆಗೆದಿಡಬೇಕು. |

**ಶ್ರವಣೋಪಕರಣವನ್ನು ಆಗಾಗ ಸರ್ವಿಸಿಗೆ (Service) ಕೊಡಿ.**

**ನಿಮ್ಮ ಶ್ರವಣೋಪಕರಣವನ್ನು ರಿಪೇರಿ ಅಥವಾ ಸರ್ವಿಸ್ ಮಾಡಿಸಿದಾಗ ಕೆಳಗಿನ ಮಾಹಿತಿಯನ್ನು ಬರೆದಿಟ್ಟುಕೊಳ್ಳಿ.**

ತಾರೀಖು:

ಅಂಗಡಿಯ ವಿಳಾಸ:

ತಗುಲಿದ ಖರ್ಚು:

**ಯಾವಾಗಲೂ ಶ್ರವಣ ತಜ್ಞರು ಹೇಳಿರುವ ಬಿಡಿ ಭಾಗಗಳನ್ನೇ ಕೊಳ್ಳಿರಿ.**

**4) ಕಿವಿಯ ಅಚ್ಚು:**




ಕಿವಿಯ ಅಚ್ಚನ್ನು ಯಾವಾಗಲೂ ಶ್ರವಣೋಪಕರಣದ ಜೊತೆ ಉಪಯೋಗಿಸಬೇಕು. ಈ ಕೆಳಗಿನ ಚಿತ್ರದಿಂದ ಶ್ರವಣೋಪಕರಣದ ವಿವಿಧ ಭಾಗಗಳನ್ನು (ವಯರ್ ರಿಸೀವರ್ ಮತ್ತು ಕಿವಿ ಅಚ್ಚು) ಹೇಗೆ ಜೋಡಿಸುವುದೆಂದು ತಿಳಿಯಬಹುದು.

1. ಶ್ರವಣೋಪಕರಣ
2. ವಯರು
3. ರಿಸೀವರ್
4. ಕಿವಿಯ ಅಚ್ಚು
5. ಕಿವಿ




ಕಿವಿ ಅಚ್ಚಿನಲ್ಲಿ ಗುಗ್ಗೆ ಇರದಂತೆ ನೋಡಿಕೊಳ್ಳಿ.

ಕಿವಿ ಅಚ್ಚನ್ನು ಯಾವಾಗಲೂ ಸ್ವಚ್ಛವಾಗಿಡಿ.

ಕಿವಿ ಅಚ್ಚನ್ನು ತೊಳೆಯುವ ಮುನ್ನ ಅದನ್ನು ಕಿವಿಬೊಟ್ಟಿನಿಂದ ಬೇರ್ಪಡಿಸಿ.

ಕಿವಿ ಅಚ್ಚನ್ನು ತೊಳೆಯಲು ಸಾಬೂನು ಮತ್ತು ಬೆಚ್ಚಗಿನ ನೀರನ್ನು ಉಪಯೋಗಿಸಿ.

ನಿಮ್ಮ ಕಿವಿಯನ್ನು ಮತ್ತು ಶ್ರವಣೋಪಕರಣವನ್ನು ಆಗಾಗ ಪರೀಕ್ಷಿಸಿಕೊಳ್ಳಿ.

**ಸೂಚನೆಗಳು:**

1. ಬಿಡಿ ಭಾಗಗಳನ್ನು ಖರೀದಿಸುವಾಗ ನಿಮ್ಮ ಶ್ರವಣೋಪಕರಣಕ್ಕೆ ಸರಿಯಾದುದನ್ನುಕೊಳ್ಳಿರಿ. ಬದಲಾಯಿಸಬೇಕಾಗಿ ಬಂದಲ್ಲಿ ಶ್ರವಣ ತಜ್ಞರ ಸಲಹೆ ಪಡೆಯಿರಿ.

2. ಒಂದು ಶ್ರವಣೋಪಕರಣದ ಬಿಡಿಭಾಗಗಳನ್ನು ಬೇರೆ ಶ್ರವಣೋಪಕರಣಕ್ಕೆ ಬದಲಾಯಿಸಬೇಡಿ.

3. ಶ್ರವಣ ತಜ್ಞರ ಸಲಹೆ ಪಡೆಯದೆ ಒಬ್ಬರ ಶ್ರವಣೋಪಕರಣವನ್ನು ಮತ್ತೊಬ್ಬರು ಉಪಯೋಗಿಸಬಾರದು.

**ನಿಮ್ಮ ಶ್ರವಣೋಪಕರಣದ ವಿವಿಧ ಭಾಗಗಳ ವಿಷಯ ತಿಳಿದಿದ್ದರೆ, ಈ ಕೆಳಗಿನ ಪ್ರಶ್ನೆಗಳನ್ನು ಉತ್ತರಿಸಬಹುದು.**

1. ನಿಮ್ಮ ಶ್ರವಣೋಪಕರಣವನ್ನು ಹೇಗೆ ಗುರುತಿಸುವಿರಿ?

2. ನಿಮ್ಮ ಶ್ರವಣೋಪಕರಣದ ಕ್ರಮಸಂಖ್ಯೆಯನ್ನು ಏಕೆ ತಿಳಿದುಕೊಂಡಿರಬೇಕು?

3. ನಿಮ್ಮ ಶ್ರವಣೋಪಕರಣದ ರಿಸೀವರ್‌ಗಳನ್ನು ಹೇಗೆ ಗುರುತಿಸುವಿರಿ?

4. ನಿಮ್ಮ ಶ್ರವಣೋಪಕರಣಕ್ಕೆ ಯಾವ ರೀತಿಯ ವಯರ್‌ನ್ನು ಉಪಯೋಗಿಸಬೇಕು?

5. ನಿಮ್ಮ ಶ್ರವಣೋಪಕರಣಕ್ಕೆ ಯಾವ ಸೆಲ್ ಉಪಯೋಗಿಸಬೇಕು?

6. ನಿಮ್ಮ ಶ್ರವಣೋಪಕರಣದ ಶಬ್ದ ನಿಯಂತ್ರಣ ಮತ್ತು ಸ್ವರ ಮಟ್ಟ ನಿಯಂತ್ರಣವನ್ನು ಯಾವ ಮಟ್ಟದಲ್ಲಿ ಇಡಬೇಕು?

ಅನುಬಂಧ 2

## ಶ್ರವಣೋಪಕರಣವನ್ನು ಬಳಸುವವರಿಗೆ ಕೆಲವು ಸಲಹೆಗಳು

**1. ತಜ್ಞರಲ್ಲಿಗೆ ಆಗಾಗ್ಗೆ ಭೇಟಿ ಕೊಡಿ. ಇದರಿಂದ ನಿಮಗೆ ಹಲವು ಉಪಯೋಗಗಳಿವೆ.**

■ ನಿಮ್ಮ ಶ್ರವಣ ಶಕ್ತಿಯನ್ನು ಆಗಾಗ್ಗೆ ಪರೀಕ್ಷಿಸಿಕೊಳ್ಳಬಹುದು. ನಿಮ್ಮ ಶ್ರವಣ ಶಕ್ತಿ ಕಡಿಮೆಯಾಗಿದ್ದಲ್ಲಿ ನೀವು ಬಳಸುತ್ತಿರುವ ಶ್ರವಣೋಪಕರಣದಿಂದಾಗುವ ಪ್ರಯೋಜನ ಕಡಿಮೆಯಾಗಬಹುದು.

■ ನಿಮ್ಮ ಶ್ರವಣೋಪಕರಣವನ್ನು ಪರೀಕ್ಷಿಸಿಕೊಳ್ಳಬಹುದು. ಸರಿಯಾಗಿ ಉಪಯೋಗಿಸಿದಲ್ಲಿ ಈ ಸಾಧನ ನಾಲ್ಕೈದು ವರ್ಷಗಳ ಕಾಲ ಬಾಳಿಕೆ ಬರುವುದು.

■ ನಿಮಗೆ ಇನ್ನೂ ಚೆನ್ನಾಗಿ ಹೊಂದಬಹುದಾದಂತಹ ಹೊಸ ಮಾದರಿಗಳು ಸಿಗುವ ಸಾಧ್ಯತೆ ಇದೆ. ಇವುಗಳ ಬಗ್ಗೆ ನಂಬಲರ್ಹ ವಿವರಗಳನ್ನು ತಜ್ಞರು ಕೊಡಬಲ್ಲರು.

■ ಕೆಲವು ಸೇವಾ ಸಂಸ್ಥೆಗಳ ಅಥವಾ ಸರ್ಕಾರಿ ಕಲ್ಯಾಣ ಯೋಜನೆಗಳ ಮೂಲಕ ಶ್ರವಣೋಪಕಣಗಳು ಕಡಿಮೆ ದರದಲ್ಲಿ ಅಥವಾ ಉಚಿತವಾಗಿ ಸಿಗಬಹುದು. ಇಂತಹ ಅನುಕೂಲಗಳು ದೊರೆಯುವುದು ತಜ್ಞರ ಮೂಲಕವೇ.

■ ಶ್ರವಣೋಪಕರಣದ ವಿವಿಧ ಬಿಡಿಭಾಗಗಳ ಬಗ್ಗೆಯೂ ತಿಳಿದುಕೊಳ್ಳಬಹುದು. ಸೇವಾ ಸಂಸ್ಥೆಗಳ ಮೂಲಕ ಕೊಂಡರೆ ಇವುಗಳ ಬೆಲೆಯೂ ಕಡಿಮೆಯಾಗಬಹುದು.

2. ಕಿವಿ, ಮೂಗು, ಗಂಟಲು ತಜ್ಞರಲ್ಲಿಗೆ ಆಗಾಗ್ಗೆ ಭೇಟಿ ಕೊಡುವುದು ಅವಶ್ಯಕ. ಇವರಿಂದ ಕಿವಿ ಪರೀಕ್ಷೆ ಮಾಡಿಸಿಕೊಳ್ಳಬಹುದು. ಕಿವಿಯ ನಾಳದಲ್ಲಿ ಗುಗ್ಗೆ ಮುಂತಾದ ಶಬ್ದವನ್ನು ತಡೆಗಟ್ಟುವ ವಸ್ತುಗಳನ್ನು ತೆಗೆಸಬಹುದು. ಕಿವಿಯಲ್ಲಿ ಗುಗ್ಗೆ ಸೇರಿಕೊಂಡರೆ ನೋವು ಕೂಡ ಉಂಟಾಗಬಹುದು.

3. ಚಿಕ್ಕ ಮಕ್ಕಳಿಗೆ ಮೊಟ್ಟಮೊದಲು ಪರೀಕ್ಷೆ ಮಾಡಿದಾಗ ಸರಿಯಾದ ಶ್ರವಣೋಪಕರಣವನ್ನು ಆಯ್ಕೆ ಮಾಡಲು ಸಾಧ್ಯವಾಗದೇ ಇರಬಹುದು. ಏಕೆಂದರೆ, ಅವರ ಶ್ರವಣ ಶಕ್ತಿಯನ್ನು ನಿಖರವಾಗಿ ನಿರ್ಧರಿಸುವುದು ಕಷ್ಟ. ಆದ್ದರಿಂದ ಅವರನ್ನು ಆಗಾಗ್ಗೆ ತಜ್ಞರಲ್ಲಿ ಕರೆದುಕೊಂಡು ಹೋಗಿ ಶ್ರವಣ ಪರೀಕ್ಷೆ ಮಾಡಿಸಬೇಕು. ಇದರಿಂದ ಮಗುವಿಗೆ ಸರಿಹೊಂದುವಂತಹ ಶ್ರವಣೋಪಕರಣವನ್ನು ಆಯ್ಕೆ ಮಾಡಲು ಸಾಧ್ಯ.

4. ಶ್ರವಣೋಪಕರಣವನ್ನು ಸರಿಯಾಗಿ ಉಪಯೋಗಿಸಲು ಕಿವಿಯಚ್ಚು ಅವಶ್ಯಕ. ಅದು ಕಿವಿಗೆ ಸರಿಯಾಗಿ ಹೊಂದುವಂತಹುದೇ ಆಗಿರಬೇಕು. ಅದನ್ನು ಇಟ್ಟುಕೊಂಡಾಗ ಕಿವಿಯಲ್ಲಿ ನೋವಿದ್ದಲ್ಲಿ ತಜ್ಞರಿಗೆ ತೋರಿಸಿ. ಚಿಕ್ಕ ಮಕ್ಕಳಿಗೆ ಹಾಗೂ ವೃದ್ಧರಿಗೆ ಕಿವಿಯಚ್ಚನ್ನು ಆಗಾಗ್ಗೆ ಮಾಡಿಸಬೇಕು. ಸರಿಯಾಗಿ ಹೊಂದದಿದ್ದ ಕಿವಿಯಚ್ಚನ್ನು ಉಪಯೋಗಿಸಿದಲ್ಲಿ ಶ್ರವಣೋಪಕಣದಿಂದ ಕೀರಲು ಧ್ವನಿ ಬರಬಹುದು.

ಕಿವಿಯಚ್ಚನ್ನು ಸ್ವಚ್ಛವಾಗಿಟ್ಟುಕೊಳ್ಳಿ. ಅವುಗಳನ್ನು ಎರಡು ದಿನಗಳಿಗೊಮ್ಮೆ ಸಾಬೂನು ನೀರಿನಲ್ಲಿ ತೊಳೆಯಿರಿ. ಅಚ್ಚಿನ ನಾಳದಲ್ಲಿ ಗುಗ್ಗೆ ಮತ್ತಿತರೆ ಕೊಳೆ ಸೇರಿದಲ್ಲಿ ಅದನ್ನು ಶುದ್ಧಗೊಳಿಸಿ. ಅವುಗಳನ್ನು ಪೂರ್ಣವಾಗಿ ಒರೆಸಿ ನಂತರ ಉಪಯೋಗಿಸಿ.

5. ಶ್ರವಣೋಪಕರಣವನ್ನು ಮೂರು ತಿಂಗಳಿಗೊಮ್ಮೆ ಪರೀಕ್ಷೆ ಮಾಡಿಸಬೇಕು. ಅದನ್ನು ತರಬೇತಿ ಪಡೆದವರ ಬಳಿಯೇ ಪರೀಕ್ಷಿಸಿಕೊಳ್ಳಿ. ನಿಮ್ಮ ಊರಿನಲ್ಲಿ, ಹತ್ತಿರದಲ್ಲಿ ಈ ತರಬೇತಿ ಹೊಂದಿರುವ ಇಬ್ಬರ ಹೆಸರು ಮತ್ತು ವಿಳಾಸವನ್ನು ತಿಳಿದುಕೊಳ್ಳಿ.

ಶ್ರವಣೋಪಕರಣವನ್ನು ಉಪಯೋಗಿಸುವಾಗ ನಿಮಗುಂಟಾದ ಅನುಭವಗಳನ್ನು ತೊಂದರೆಗಳನ್ನು ಬರೆದಿಟ್ಟುಕೊಳ್ಳಿರಿ. ಶ್ರವಣೋಪಕರಣ ತಜ್ಞರನ್ನು ಕಂಡಾಗ ಅವುಗಳ ಬಗ್ಗೆ ವಿಚಾರಿಸಿ ತಿಳಿದುಕೊಳ್ಳಿರಿ.

ಅನುಬಂಧ 3

# ಶ್ರವಣೋಪಕರಣದ ರಕ್ಷಣೆ

ಶ್ರವಣೋಪಕರಣ ನಿಶ್ಯಬ್ದ ಪ್ರಪಂಚದಿಂದ ಶಬ್ದ ಪ್ರಪಂಚಕ್ಕೆ ಒಯ್ಯುವ ಒಂದು ಸಾಧನ. ವೈದ್ಯಕೀಯ ಔಷಧಿ, ಮಾತ್ರೆ, ಅಥವಾ ಶಸ್ತ್ರಚಿಕಿತ್ಸೆಯಿಂದ ವಾಸಿಯಾಗದ ಕಿವುಡುತನಕ್ಕೆ ಶ್ರವಣೋಪಕರಣವೇ ಶಬ್ದವನ್ನು ಜೋರಾಗಿ ಕೇಳುವಂತೆ ಮಾಡುತ್ತದೆ.

ಹುಟ್ಟು ಕಿವುಡು ಮಕ್ಕಳಿಗೆ ಮಾತು ಕಲಿಯಲು ಈ ಉಪಕರಣ ಬಹಳ ಉಪಕಾರಿ. ಇದನ್ನು ಉಪಯೋಗಿಸಿ ವಾಕ್ ತರಬೇತಿ ಮತ್ತು ಅಭ್ಯಾಸದಿಂದ ಮಕ್ಕಳು ಮಾತು ಕಲಿಯಬಹುದು. ದೊಡ್ಡವರಿಗೆ ಕಿವುಡಾಗಿದ್ದಲ್ಲಿ ಶ್ರವಣೋಪಕರಣದ ಸಹಾಯದಿಂದ ಕೇಳಬಹುದು.

ಶ್ರವಣೋಪಕರಣವು ಬಹಳ ಬೆಲೆ ಬಾಳುವ ಸಾಧನ. ಇದು ಸೂಕ್ಷ್ಮವಾದ ಭಾಗಗಳಿಂದ ಮಾಡಲ್ಪಟ್ಟಿದೆ. ಇದನ್ನು ಜೋಪಾನವಾಗಿ ಉಪಯೋಗಿಸಬೇಕು. ಬೇಜವಾಬ್ದಾರಿತನ ಅಥವಾ ಒರಟಾಗಿ ಉಪಯೋಗಿಸಿದಲ್ಲಿ ಇದರ ಶಕ್ತಿ ಬೇಗ ಕಡಿಮೆಯಾಗುವುದಲ್ಲದೆ ಬೇಡದ ಶಬ್ದಗಳು ಇದರಿಂದ ಹೊರಹೊಮ್ಮುತ್ತವೆ. ಎಚ್ಚರದಿಂದ ಮತ್ತು ನಯವಾಗಿ ಉಪಯೋಗಿಸಿದಲ್ಲಿ ಶ್ರವಣಯಂತ್ರ ಹೆಚ್ಚು ಕಾಲ ಬಾಳಿಕೆ ಬರುತ್ತದೆ.

1. ಸ್ವರ ಮಟ್ಟ ನಿಯಂತ್ರಣ.
2. ಆನ್-ಆಫ್ ಸ್ವಿಚ್.
3. ಶಬ್ದ ನಿಯಂತ್ರಣ.
4. ಮೈಕ್.
5. ಕ್ಲಿಪ್.
6. ಬ್ಯಾಟರಿಯನ್ನು ಇಡುವ ಜಾಗ.
7. ವಯರ್.
8. ರಿಸೀವರ್.
9. ಕಿವಿ ಅಚ್ಚು.




ಚಿತ್ರದಲ್ಲಿ ತೋರಿಸಿರುವ ಶ್ರವಣೋಪಕರಣದ ಭಾಗಗಳನ್ನು ಈ ಕೆಳಗೆ ವಿವರಿಸಲ್ಪಟ್ಟಿದೆ.

**ಆನ್ ಮತ್ತು ಆಫ್ ಮಾಡುವ ಭಾಗ :**

ಈ ಭಾಗವು ಶ್ರವಣೋಪಕರಣ ಕೆಲಸ ಮಾಡಲು ಮತ್ತು ಮಾಡದಿರಲು ಸಹಾಯ ಮಾಡುತ್ತದೆ. ಇದನ್ನು 'M' ನಲ್ಲಿ ಇಟ್ಟಾಗ ಎಂದರೆ 'ಆನ್' ಮಾಡಿದಾಗ ಶ್ರವಣೋಪಕರಣವು ತನ್ನ ಕೆಲಸ ಮಾಡುತ್ತದೆ ಮತ್ತು ಈ ಭಾಗವನ್ನು 'O' ನಲ್ಲಿ ಇಟ್ಟಾಗ ಎಂದರೆ ಆಫ್ ಮಾಡಿದಾಗ ಶ್ರವಣೋಕರಣವು ತನ್ನ ಕೆಲಸವನ್ನು ನಿಲ್ಲಿಸುತ್ತದೆ. ಇದರಿಂದ ಅವಶ್ಯಕತೆ ಇರುವಾಗ ಕೇಳಬಹುದು ಮತ್ತು ಉಪಯೋಗಿಸದಿದ್ದಲ್ಲಿ ಅದರ ಕೆಲಸವನ್ನು ನಿಲ್ಲಿಸಬಹುದು.




**ಶ್ರವಣೋಪಕರಣದ ಸ್ವಿಚ್ಚುಗಳು.**

1. ಶಬ್ದ ಮಟ್ಟ ನಿಯಂತ್ರಕ.
2. ಆನ್-ಆಫ್ ಮಾಡುವ ಭಾಗ.
3. ಸ್ವರ ಮಟ್ಟ ನಿಯಂತ್ರಕ.

ಸ್ವಿಚ್ಚನ್ನು ಆನ್ ಮಾಡುವಾಗ ಶಬ್ದ ಹೆಚ್ಚು ಕಡಿಮೆ ಮಾಡುವ ಭಾಗ (ಶಬ್ದ ಮಟ್ಟ ನಿಯಂತ್ರಣ) ಕಡಿಮೆ ಅಂಕಿಯಲ್ಲಿ (1) ಇರಬೇಕು. ಬ್ಯಾಟರಿ (ಸೆಲ್ಲು) ವಯರ್ (CORD), ಕಿವಿಯ ರಿಸೀವರ್ ಅನ್ನು ಬದಲಾಯಿಸುವಾಗ ಮತ್ತು ಕಿವಿ ಅಚ್ಚನ್ನು (EAR MOULD) ಕಿವಿಗೆ ಜೋಡಿಸುವಾಗ, ಆನ್ ಆಫ್ ಸ್ವಿಚ್ಚನ್ನು 'ಆಫ್' ಮಾಡಿರಬೇಕು.

## *ಟೆಲಿ ಮೈಕ್ ಸ್ವಿಚ್ (Tele - Mic Switch)*

ಕೆಲವು ಶ್ರವಣೋಪಕರಣಗಳು ಟೆಲಿಫೋನ್ ಮಾತು ಕೇಳಲು ಅನುಕೂಲವಾಗುವಂತೆ ತಯಾರಿಸಲ್ಪಟ್ಟಿದೆ. ಈ ಭಾಗವನ್ನು 'T' ಗೆ ತಿರುಗಿಸಿ 3 ನೇ ಚಿತ್ರದಲ್ಲಿ ತೋರಿಸಿರುವಂತೆ ಫೋನ್ ಹಿಡಿದರೆ ಫೋನ್ ಮಾತನ್ನು ಕೇಳಿಸಿಕೊಳ್ಳಬಹುದು.

**ಟೆಲಿಫೋನ್ ಇಟ್ಟುಕೊಳ್ಳುವ ವಿಧಾನ.**

1. ಫೋನ್.
2. ಶ್ರವಣೋಪಕರಣ.




ಈ ಭಾಗವನ್ನು 'MT' ಗೆ ಇಟ್ಟರೆ ಟೆಲಿಫೋನ್ ಮತ್ತು ಹೊರಗಿನ ಮಾತು ಎರಡನ್ನೂ ಕೇಳಬಹುದು.

### ಶಬ್ದಮಟ್ಟ ನಿಯಂತ್ರಕ. (Volume Control)

ಇದರಿಂದ ಶಬ್ದವನ್ನು ಹೆಚ್ಚು ಅಥವಾ ಕಮ್ಮಿ ಮಾಡಬಹುದು. ಇದರಲ್ಲಿ ಒಂದರಿಂದ ಒಂಬತ್ತರವರೆಗೆ ಅಂಕಿಗಳಿವೆ. ಒಂದಕ್ಕಿಂತ ಜಾಸ್ತಿ ಮಾಡಿದಲ್ಲಿ ಶಬ್ದ ಹೆಚ್ಚಾಗುತ್ತದೆ. ಜಾಸ್ತಿ ಅಂಕಿಯಿಂದ ಕಡಿಮೆ ಅಂಕಿಗೆ ತಿರುಗಿಸಿದಾಗ ಶಬ್ದ ಕಡಿಮೆಯಾಗುತ್ತದೆ. ಬ್ಯಾಟರಿಯ ಶಕ್ತಿ ಕಡಿಮೆಯಾದಂತೆ ಇದನ್ನು ಜಾಸ್ತಿ ಅಂಕಿಗೈ ತಿರುಗಿಸಬೇಕಾಗುತ್ತದೆ. ಹಾಗೆ ತಿರುಗಿಸುವಾಗ '6' ರ ತನಕ ಹೆಚ್ಚಿಸಬಹುದು. ಅಲ್ಲೂ ಕೇಳದಿದ್ದಾಗ ಬ್ಯಾಟರಿಯನ್ನು ಬದಲಾಯಿಸಬೇಕು. '6' ಕ್ಕಿಂತ ಅಥವಾ ಮೂರನೇ ಎರಡು ಭಾಗಕ್ಕಿಂತ ಮೇಲೆ ತಿರುಗಿಸಿ ಕೇಳಲು ಪ್ರಯತ್ನಿಸಿದರೆ ಕರ್ಕಶ ಶಬ್ದ ಬರುತ್ತದೆ. ಮಾತನ್ನು ಸ್ಪಷ್ಟವಾಗಿ ಕೇಳಲಾಗುವುದಿಲ್ಲ. ಈ ಭಾಗವನ್ನು ಯಾವ ಅಂಕಿಯಲ್ಲಿ ಇಟ್ಟರೆ ಸ್ಪಷ್ಟವಾಗಿ ಕೇಳುವುದೋ ಅದರಲ್ಲಿ ಇಟ್ಟು ಕೇಳುವುದು ಒಳ್ಳೆಯದು. ಜಾಸ್ತಿ ಅಂಕಿಯಲ್ಲಿ ಇಟ್ಟರೆ, ಬೇಡದ್ದ ಶಬ್ದಗಳೂ ಮಾತಿನ ಜೊತೆಯಲ್ಲಿ ಕೇಳುವುದು ಹೆಚ್ಚಾಗುತ್ತದೆ.

### ಸ್ವರ ಮಟ್ಟ ನಿಯಂತ್ರಕ (Tone Control)

ಇದು ಸ್ವರವನ್ನು ನಿಯಂತ್ರಿಸುವ ಭಾಗ. ಇದರಲ್ಲಿ ಮೂರು ಅಕ್ಷರಗಳಿರುತ್ತವೆ. (N. H. L.) ನಿಮ್ಮ ತೊಂದರೆಗೆ ಅನುಗುಣವಾಗಿ ತಜ್ಞರು ಸೂಚಿಸಿದಂತೆ ಇದನ್ನು ಇಟ್ಟುಕೊಳ್ಳಬೇಕು. 'N' ಗೆ ಇಟ್ಟಾಗ ಎಲ್ಲಾ ಶಬ್ದಗಳೂ ಒಂದೇ ರೀತಿಯಲ್ಲಿ ವರ್ಧಿಸಲ್ಪಡುತ್ತದೆ. 'L' ತಗ್ಗು ಸ್ವರಗಳನ್ನು ಮತ್ತು 'H' ಎತ್ತರ ಸ್ವರಗಳನ್ನೂ ಕೇಳಿಸಲು ಸಹಾಯವಾಗುತ್ತದೆ.

ಎಲ್ಲಾ ಸ್ವಿಚ್ಚುಗಳನ್ನೂ ಸೂಕ್ಷ್ಮವಾಗಿ, ನಿಧಾನವಾಗಿ ಉಪಯೋಗಿಸಬೇಕು. ಒರಟಾಗಿ ಉಪಯೋಗಿಸಿದರೆ ಸ್ವಿಚ್ಚುಗಳೇ ಕಿತ್ತು ಬರುವ ಸಂಭವವುಂಟು. ಈ ಸ್ವಿಚ್ಚುಗಳನ್ನು ಬೇಕೆಂದಾಗ ಮಾತ್ರ ತಿರುಗಿಸಬೇಕು. ಅನಾವಶ್ಯಕವಾಗಿ ತಿರುಗಿಸುತ್ತಿದ್ದಲ್ಲಿ ಸ್ವಿಚ್ಚುಗಳು ಹಾಳಾಗುತ್ತವೆ.

### ಮೈಕ್ (Mic)

ಶ್ರವಣೋಪಕರಣ ಕವಚದಲ್ಲಿ ಕಾಣುವ ಕಿಟಕಿಯ ತರಹದ ಭಾಗವೇ ಮೈಕ್. ಇದು ಸುತ್ತಮುತ್ತಲಿನ ಶಬ್ದಗಳನ್ನು ಗ್ರಹಿಸುತ್ತದೆ ಮತ್ತು ಶಬ್ದದ ತರಂಗಗಳನ್ನು ವಿದ್ಯುತ್ ತರಂಗಗಳನ್ನಾಗಿ ರೂಪಾಂತರಿಸುತ್ತದೆ. ಈ ವಿದ್ಯುತ್ ತರಂಗಗಳ ಶಕ್ತಿಯನ್ನು ಶ್ರವಣೋಪಕರಣವು ವರ್ಧಿಸುತ್ತದೆ. ಈ ವರ್ಧಿಸಲ್ಪಟ್ಟ ವಿದ್ಯುತ್ ತರಂಗಗಳನ್ನು ರಿಸೀವರ್ ಭಾಗ ಪುನಃ ಶಬ್ದದ ತರಂಗಗಳನ್ನಾಗಿ ರೂಪಾಂತರಿಸಿ ಕೇಳುವ ಹಾಗೆ ಮಾಡುತ್ತದೆ.

ಮೈಕನ್ನು ಬಟ್ಟೆಯಿಂದ ಮುಚ್ಚಬಾರದು. ಏಕೆಂದರೆ ಬಟ್ಟೆಯು ಶಬ್ದದ ಕೆಲವು ಭಾಗಗಳನ್ನು ಹೀರಿಕೊಳ್ಳುವುದರಿಂದ ಪೂರ್ತಿ ಮಾತಿನ ಶಬ್ದವು ಕಿವಿಯನ್ನು ತಲುಪುವುದಿಲ್ಲ. ಇದರಿಂದ ಮಾತುಗಳು ಸರಿಯಾಗಿ ಅರ್ಥವಾಗುವುದಿಲ್ಲ.

ಈ ಭಾಗಕ್ಕೆ ಬಿಸಿ (ಶಾಖ) ಮತ್ತು ಕ್ಷ-ಕಿರಣಗಳು (X -ray) ತಾಕಬಾರದು. ನೀರಾಗಲೀ, ಧೂಳಾಗಲೀ ಚಿಕ್ಕ ಜಂತುಗಳಾಗಲೀ, ಪುಟ್ಟ ವಸ್ತುಗಳಾಗಲಿ ಇದರೊಳಗೆ ಹೋಗದಂತೆ ನೋಡಿಕೊಳ್ಳಿ. ನಿಮ್ಮ ಮಗು ಆಟವಾಡುವಾಗ ಇದರ ಮೇಲೆ ಅನ್ನ ಅಥವಾ ಇನ್ನೇನಾದರೂ ಊಟದ ಪದಾರ್ಥಗಳನ್ನು ಚೆಲ್ಲದಂತೆ ನೋಡಿಕೊಳ್ಳಿ.

### *ಬ್ಯಾಟರಿ (ಸೆಲ್ಲು)*

ಬ್ಯಾಟರಿಯಿಲ್ಲದೇ ಶ್ರವಣೋಪಕರಣವನ್ನು ಬಳಸಲು ಆಗುವುದಿಲ್ಲ. ಬೇರೆ ಬೇರೆ ತರಹದ ಶ್ರವಣೋಪಕರಣಗಳಿಗೆ ಬೇರೆ ಬೇರೆ ತರಹದ ಬ್ಯಾಟರಿಗಳಿವೆ. ಬ್ಯಾಟರಿಯು ಶ್ರವಣೋಪಕರಣ ಕೆಲಸ ಮಾಡಲು ಸಹಾಯವಾಗುವಂತೆ ವಿದ್ಯುಚ್ಛಕ್ತಿಯನ್ನು ಶ್ರವಣೋಪಕರಣದ ವಿವಿಧ ಭಾಗಗಳಿಗೆ ಹರಿಸುತ್ತದೆ. ಸಾಮಾನ್ಯವಾಗಿ ಶ್ರವಣೋಪಕರಣಗಳು 1.5 ವೋಲ್ಟ್ ಬ್ಯಾಟರಿಯಿಂದ

ಕೆಲಸ ಮಾಡಲ್ಪಡುತ್ತದೆ. 1.0 ವೋಲ್ಟ್‌ಗಿಂತ ಕಮ್ಮಿ ಇದ್ದಲ್ಲಿ ಶ್ರವಣೋಪಕರಣವು ಕೆಲಸ ಮಾಡುವುದಿಲ್ಲ.

ಪ್ರತಿಯೊಂದು ಬ್ಯಾಟರಿಯಲ್ಲೂ '+' ಚಿಹ್ನೆ ಒಂದು ತುದಿಯಲ್ಲೂ '-' ಚಿಹ್ನೆ ಮತ್ತೊಂದು ತುದಿಯಲ್ಲೂ ಇರುತ್ತದೆ. ಶ್ರವಣೋಪಕರಣದಲ್ಲಿಯೂ ಬ್ಯಾಟರಿಯನ್ನು ಇಡುವ ಜಾಗದಲ್ಲಿ '+' ಚಿಹ್ನೆ ಒಂದು ತುದಿಯಲ್ಲೂ '-' ಚಿಹ್ನೆ ಮತ್ತೊಂದು ತುದಿಯಲ್ಲೂ ಇರುತ್ತದೆ. ಚಿತ್ರ 4 ರಲ್ಲಿ ತೋರಿಸಿರುವಂತೆ ಬ್ಯಾಟರಿಯನ್ನು ಶ್ರವಣೋಪಕರಣಕ್ಕೆ ಜೋಡಿಸುವಾಗ ಎರಡು '+' ಚಿಹ್ನೆಗಳೂ ಒಂದು ತುದಿಯಲ್ಲಿ ಮತ್ತು ಎರಡು '-' ಚಿಹ್ನೆಗಳೂ ಮತ್ತೊಂದು ತುದಿಯಲ್ಲಿ ಬರುವಂತೆ ಜೋಡಿಸಬೇಕು. ಬ್ಯಾಟರಿಯನ್ನು ಸರಿಯಾಗಿ ಇಡದಿದ್ದರೆ ಶ್ರವಣೋಪಕರಣವು ಕೆಲಸ ಮಾಡುವುದಿಲ್ಲ. ಶ್ರವಣೋಪಕರಣವನ್ನು ಉಪಯೋಗಿಸದಿದ್ದಾಗ ಬ್ಯಾಟರಿಯನ್ನು ತೆಗೆದು ಒಂದು ಪುಟ್ಟ ಪೆಟ್ಟಿಗೆಯಲ್ಲಿ ಸುರಕ್ಷಿತವಾಗಿ ಇಡಿ.




ಬ್ಯಾಟರಿಯನ್ನು ಜೋಡಿಸುವ ವಿಧಾನ

1. ವಯರ್ ಹಾಕುವ ರಂಧ್ರ.
2. ಬ್ಯಾಟರಿ.

ಹೊಸ ಬ್ಯಾಟರಿಯನ್ನು ಹಾಕುವಾಗ ಶ್ರವಣೋಪಕರಣವನ್ನು 'ಆಫ್' ಮಾಡಬೇಕು. ದೀರ್ಘಕಾಲ ಶ್ರವಣೋಪಕರಣವನ್ನು ಉಪಯೋಗಿಸದಿದ್ದಲ್ಲಿ ಬ್ಯಾಟರಿಯನ್ನು ಶ್ರವಣೋಪಕರಣದಿಂದ ಹೊರಗೆ ತೆಗೆದಿಡುವುದು ಉತ್ತಮ. ಹಾಗೆ ಮಾಡದಿದ್ದಲ್ಲಿ ಲೋಹದ ಸಂಪರ್ಕ ಮತ್ತು ಗಾಳಿಯ ತೇವದಿಂದ ಬ್ಯಾಟರಿ ಕೆಟ್ಟು ಶ್ರವಣೋಪಕರಣವನ್ನು ಹಾಳು ಮಾಡುವುದು.

ಶ್ರವಣೋಪಕರಣಕ್ಕೆ ಬ್ಯಾಟರಿಯನ್ನು ಜೋಡಿಸುವಾಗ ಅದರ ತುದಿಗಳನ್ನೂ, ಶ್ರವಣೋಪಕರಣದ ಬ್ಯಾಟರಿ ಇಡುವ ಸ್ಥಳವನ್ನೂ ಸ್ವಚ್ಛಮಾಡಿ ಇಡಿ. ಕೆಲವು ಬ್ಯಾಟರಿಯ ಕೆಳಗೆ ಪ್ಲಾಸ್ಟಿಕ್ ಪದರ ಅಂಟಿಕೊಂಡಿರುತ್ತದೆ. ಅದನ್ನು ಬ್ಲೇಡಿನಿಂದ ತೆಗೆದು ನಂತರ ಉಪಯೋಗಿಸಿ.

### *ವಯರ್ (Cord)*

ಇದು ರಿಸೀವರವನ್ನು ಶ್ರವಣೋಪಕರಣದ ಇತರ ಭಾಗಗಳೊಂದಿಗೆ ಸೇರಿಸುತ್ತದೆ. ಇದರ ತುದಿಗಳಲ್ಲಿ ಪಿನ್ನುಗಳಿರುತ್ತವೆ. ಚಿತ್ರ (5) ರಲ್ಲಿ ತೋರಿಸಿರುವಂತೆ ಒಂದು ಪಿನ್ನು ಸಣ್ಣದಾಗಿಯೂ ಮತ್ತೊಂದು ಪಿನ್ನಿ ಅದಕ್ಕಿಂತ ದಪ್ಪವಾಗಿಯೂ ಇರುತ್ತದೆ. ಶ್ರವಣೋಪಕರಣ ಮತ್ತು ಕಿವಿ ಬೊಟ್ಟಿನಲ್ಲಿಸಹ ಒಂದು ಸಣ್ಣ ಮತ್ತು ಒಂದು ಅದಕ್ಕಿಂತ ಸ್ವಲ್ಪ ದಪ್ಪವಾದ ರಂಧ್ರಗಳಿರುತ್ತವೆ. ಚಿತ್ರದಲ್ಲಿ ತೋರಿಸಿರುವಂತೆ ಸಣ್ಣ ಪಿನ್ನನ್ನು ಸಣ್ಣ ರಂಧ್ರಕ್ಕೂ, ದಪ್ಪ ಪಿನ್ನನ್ನು ದಪ್ಪ ರಂಧ್ರಕ್ಕೂ ಜೋಡಿಸಬೇಕು.




ವಯರ್‌ನ್ನು ಹಾಕುವ ವಿಧಾನ

1. ಶ್ರವಣೋಪಕರಣ.
2. ವಯರ್.
3. ರಿಸೀವರ್.

ವಯರ್‌ನಲ್ಲಿ ಅನೇಕ ವಿಧಗಳಿವೆ. ಕೆಲವು ವಯರ್‌ಗಳಲ್ಲಿ ಮೂರು ಪಿನ್ನುಗಳಿರುತ್ತವೆ. (ಒಂದು ದೊಡ್ಡದು, ಎರಡು ಚಿಕ್ಕದು) ಎರಡೂ ಕಿವಿಗಳಿಗೆ ಉಪಯೋಗಿಸುವ ವಯರ್ ಒಂದೇ ಕಿವಿಗೆ ಉಪಯೋಗಿಸುವ ವಯರ್‌ಗಿಂತ ಭಿನ್ನವಾಗಿರುತ್ತದೆ. ನಿಮ್ಮ ಶ್ರವಣೋಪಕರಣಕ್ಕೆ ಸರಿಹೊಂದುವ ವಯರ್‌ನ್ನೇ ಉಪಯೋಗಿಸಬೇಕು.

ವಯರ್‌ನ್ನು ಅನಾವಶ್ಯಕವಾಗಿ ತೆಗೆಯಬಾರದು. ತೆಗೆಯಲೇಬೇಕಾದರೆ ಅದರ ಪ್ಲಾಸ್ಟಿಕ್ ತುದಿಯನ್ನು ಭದ್ರವಾಗಿ ಹಿಡಿದು ಮೆತ್ತಗೆ ಎಳೆಯಿರಿ. ವಯರ್‌ನ್ನು ಮಕ್ಕಳು ಜಗಿಯದಂತೆ, ಅಥವಾ ಕೈಯಲ್ಲಿ ಸುತ್ತಿಕೊಂಡು ಆಟವಾಡದಂತೆ ನೋಡಿಕೊಳ್ಳಬೇಕು.

ವಯರ್‌ನ ತುದಿ ಮತ್ತು ಅದನ್ನು ಹಾಕುವ ರಂಧ್ರಗಳನ್ನು ಆಗಾಗ ಒಂದು ಪುಟ್ಟ ಬ್ರಷ್‌ನಿಂದ ಶುಚಿ ಮಾಡುತ್ತಿರಬೇಕು.

### *ರಿಸೀವರ್ (Receiver) (ಕಿವಿಬೊಟ್ಟು)*

ಇದು ಶ್ರವಣೋಪಕರಣದ ಒಂದು ಮುಖ್ಯಭಾಗ. ಇದು ವರ್ಧಿಸಲ್ಪಟ್ಟ ವಿದ್ಯುತ್ ತರಂಗಗಳನ್ನು ಶಬ್ದ ತರಂಗಗಳಾಗಿ ಮಾರ್ಪಡಿಸುತ್ತದೆ. ಶ್ರವಣೋಪಕರಣ ಹಾಗೂ ಕಿವುಡುತನಕ್ಕೆ ಅನುಗುಣವಾಗಿ ಬೇರೆ ಬೇರೆ ರಿಸೀವರ್‌ಗಳಿರುತ್ತವೆ. ಇದನ್ನು ಬದಲಾಯಿಸುವಾಗ ಶ್ರವಣೋಪಕರಣಕ್ಕೆ ಹೊಂದುವ ರಿಸೀವರನ್ನೇ ಪಡೆಯಬೇಕು.

ರಿಸೀವರ್ ಅನ್ನು ವಯರ್‌ನೊಂದಿಗೆ ಸರಿಯಾಗಿ ಜೋಡಿಸಬೇಕು. ಇದು ಬಹಳ ಸೂಕ್ಷ್ಮವಾದದ್ದು. ಕೆಳಗೆ ಬೀಳದಂತೆ, ಗೋಡೆ, ಮೇಜು ಮುಂತಾದ ಗಟ್ಟಿ ಪದಾರ್ಥಕ್ಕೆ ತಾಕದಂತೆ ನೋಡಿಕೊಳ್ಳಬೇಕು. ಕಿವಿ ಅಚ್ಚನ್ನು ತೊಳೆಯುವಾಗ ರಿಸೀವರಿನಿಂದ ತೆಗೆದು ತೊಳೆಯಬೇಕು. ರಿಸೀವರಿನ ಒಳಗೆ ಧೂಳು, ನೀರು ಹೋಗದ ಹಾಗೆ ನೋಡಿಕೊಳ್ಳಬೇಕು.

ರಿಸೀವರನ್ನು ಸುಮ್ಮಸುಮ್ಮನೆ ಕಿವಿ ಅಚ್ಚಿನಿಂದ ಬೇರ್ಪಡಿಸಬಾರದು. ಮಗುವು ಶ್ರವಣೋಪಕರಣವನ್ನು ಧರಿಸಿರುವಾಗ ಅವನಿಗೆ ಏಟು ಬೀಳದಂತೆ ಎಚ್ಚರವಹಿಸಬೇಕು.

### *ಕಿವಿಅಚ್ಚು (Ear Mould)*

ಕಿವಿ ಅಚ್ಚು ಶ್ರವಣೋಪಕರಣದ ಕಿವಿ ಬೊಟ್ಟನ್ನು ಕಿವಿಯ ಮೇಲೆ ಸರಿಯಾಗಿ ಕೂರಿಸಲು ಸಹಾಯಕ. ಕಿವಿ ಬೊಟ್ಟಿನಿಂದ ಬಂದ ಶಬ್ದವು ಕಿವಿ ಅಚ್ಚಿನ ರಂಧ್ರದ ಮೂಲಕ ಕಿವಿಯನ್ನು ತಲುಪುತ್ತದೆ. ಕಿವಿಗಳು ಆಕಾರ, ಗಾತ್ರದಲ್ಲಿ ಬದಲಾಗುವುದರಿಂದ, ಉಪಯೋಗಿಸುವವರ ಕಿವಿಯ ಅಳತೆಯನ್ನು ತೆಗೆದುಕೊಂಡು ಮಾಡಲ್ಪಟ್ಟ ಕಿವಿ ಅಚ್ಚನ್ನು ಉಪಯೋಗಿಸುವುದು ಅವಶ್ಯಕ. ಒಂದೊಂದು ಕಿವಿಗೂ ಬೇರೆಬೇರೆ ಅಚ್ಚು ಮಾಡಿಸಬೇಕು. ಒಂದು ಕಿವಿಯ ಅಚ್ಚನ್ನು ಮತ್ತೊಂದು ಕಿವಿಗೆ ಹಾಕಲು ಸಾಧ್ಯವಿಲ್ಲ. ಕಿವಿಯ ಅಳತೆ ಪಡೆದು ಅಚ್ಚು ಮಾಡುವ ಸೌಲಭ್ಯ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯಲ್ಲಿದೆ.

### *ಕಿವಿಗೆ ಸರಿಹೊಂದದ ಅಚ್ಚಿನಿಂದ ಆಗುವ ತೊಂದರೆಗಳು ಬಹಳ.*

ದೊಡ್ಡದಾದ ಅಚ್ಚು ಕಿವಿಯನ್ನು ಒತ್ತಿ ನೋವುಂಟು ಮಾಡಬಹುದು. ಇದರಿಂದ ಕಿವಿಯಲ್ಲಿ ಹುಣ್ಣಾಗಬಹುದು. ಚಿಕ್ಕದಾದ ಅಚ್ಚನ್ನು ಉಪಯೋಗಿಸಿದರೆ, ಕಿವಿಯೊಳಗೆ ಹೋಗಬೇಕಾದ ಶಬ್ದ ಹೊರಬಿದ್ದು ಅಹಿತಕರ ಶಬ್ದವುಂಟಾಗಬಹುದು. ಅಲ್ಲದೇ ಶ್ರವಣೋಪಕರಣದ ಶಬ್ದ ನಿಯಂತ್ರಣವನ್ನು ಹೆಚ್ಚು ಶಬ್ದ ಬರುವಂತೆ ಉಪಯೋಗಿಸಲು ಸಾಧ್ಯವಾಗದೇ ಇರಬಹುದು. ಈ ಎಲ್ಲಾ ಕಾರಣದಿಂದ ತಮ್ಮದೇ ಕಿವಿಯ ಪಡಿಯಚ್ಚಿನಿಂದ ಮಾಡಲ್ಪಟ್ಟ ಕಿವಿಯಚ್ಚನ್ನೇ ಉಪಯೋಗಿಸುವುದು ಅವಶ್ಯಕ. ಮಕ್ಕಳಿಗೆ ಇದರ ಅವಶ್ಯಕತೆ ಇನ್ನೂ ಹೆಚ್ಚು. ಉಪಯೋಗಿಸುವ ಅಚ್ಚು ಹಿತಕರವಾಗಿಲ್ಲವಾದರೆ ಮಕ್ಕಳು ಶ್ರವಣೋಪಕರಣವನ್ನೇ ಧರಿಸಲು ತಿರಸ್ಕರಿಸಬಹುದು.

ಉಪಯೋಗಿಸುತ್ತಿರುವ ಕಿವಿಯಚ್ಚುಗಳು ಸಡಿಲವಾದಲ್ಲಿ ಬೇರೆಯದನ್ನು ಮಾಡಿಸಿ ಉಪಯೋಗಿಸುವುದು ಒಳ್ಳೆಯದು. ಬೆಳೆಯುವ ಮಕ್ಕಳ ಕಿವಿಯಚ್ಚು ಬೇಗ ಸಡಿಲವಾಗುವುದರಿಂದ ವರ್ಷಕ್ಕೆ ಒಮ್ಮೆಯಾದರೂ ಬದಲಾಯಿಸಬೇಕಾಗುತ್ತದೆ. ವೃದ್ಧರಲ್ಲಿಯೂ ಕಿವಿಯ ಚರ್ಮ ಮುದುರುವುದರಿಂದ ಕಿವಿಯ ಅಳತೆ ಬದಲಾಗುತ್ತದೆ. ಆದ್ದರಿಂದ ಅವರಿಗೂ ಕಿವಿಯಚ್ಚನ್ನು ಬದಲಾಯಿಸಬೇಕಾಗುತ್ತದೆ.

ಕಿವಿಯಚ್ಚಿನೊಳಗೆ ರಿಸೀವರನ್ನು ಸರಿಯಾಗಿ ಕೂರಿಸಬೇಕು. ಅದು ತಾನಾಗಿಯೇ ತಿರುಗಬಾರದು. ಹಾಗೆ ತಿರುಗಿದಲ್ಲಿ ಅಚ್ಚಿನಲ್ಲಿರುವ 'ರಿಂಗ್' ಅನ್ನು ಸರಿಯಾಗಿ ಹಾಕಬೇಕು.

**ಶ್ರವಣೋಪಕರಣ ಹಾಗೂ ಕಿವಿಯನ್ನು ಜೋಡಿಸುವ ಕಿವಿ ಅಚ್ಚು**

1. ಕಿವಿಯಾಲೆ
2. ರಿಸೀವರ್
3. ಕಿವಿ ಅಚ್ಚು
4. ಕಿವಿ
5. ಕಿವಿಯ ನಾಳ
6. ಕಿವಿ ಅಚ್ಚಿನ ನಾಳ




ಕಿವಿ ಅಚ್ಚನ್ನು ಹೆಬ್ಬೆರಳು ಮತ್ತು ತೋರು ಬೆರಳಿನ ಮಧ್ಯೆ ಹಿಡಿದು ಕಿವಿಯಚ್ಚಿನ ನಾಳದಾರಿ, ಕಿವಿಯ ನಾಳದಾರಿಯ ಒಳಗೆ ಹೋಗುವಂತೆ ಅದುಮಿ, ಕಿವಿಯ ಮೇಲ್ಭಾಗದಲ್ಲಿ ಸರಿಯಾಗಿ ಕೂರುವಂತೆ ತಿರುಗಿಸಿ.

ಕಿವಿಯ ಅಚ್ಚನ್ನು ಇಲಿ ಮುಂತಾದವುಗಳು ಕಚ್ಚಿಕೊಂಡು ಹೋಗದಂತೆ ಜೋಪಾನವಾದ ಸ್ಥಳದಲ್ಲಿ ಇಡಿ. ಅಚ್ಚು 'ಅಕ್ರಲಿಕ್' ಎಂಬ ಪ್ಲಾಸ್ಟಿಕ್ ಪದಾರ್ಥದಿಂದ ತಯಾರಾಗಿರುವುದು. ಅದು ಆಮ್ಲಗಳೊಂದಿಗೆ ರಾಸಾಯನಿಕವಾಗಿ ವರ್ತಿಸುತ್ತದೆ. ಆದುದರಿಂದ ಕಿವಿ ಅಚ್ಚನ್ನು ಆಮ್ಲಗಳಿಂದ ದೂರವಿಡಿ.

ನಿಮ್ಮ ಮಕ್ಕಳು ತಮಾಷೆಗಾಗಿಯೂ ಕಸ,ಮಣ್ಣು, ಕಡ್ಡಿ ಮುಂತಾದವುಗಳನ್ನು ಕಿವಿಯಚ್ಚಿನ ನಾಳದೊಳಗೆ ಹಾಕದಂತೆ ಎಚ್ಚರವಹಿಸಿ.

ಕಿವಿ ಸೋರುತ್ತಿದ್ದರೆ ಕಿವಿಯಚ್ಚನ್ನು ಕಿವಿಯೊಳಗೆ ಹಾಕಬೇಡಿ. ಒಂದು ಕಿವಿ ಸೋರುತ್ತಾ ಇದ್ದರೆ, ಸೋರದ ಕಿವಿಗೆ ಮಾತ್ರ ಶ್ರವಣೋಪಕರಣವನ್ನು ಉಪಯೋಗಿಸಿರಿ. ಕಿವಿ ಸೋರಿದರೆ ಮತ್ತು ಕಿವಿಯಲ್ಲಿ ಹೆಚ್ಚು ಗುಗ್ಗೆ ಸೇರಿದರೆ ವೈದ್ಯರ ಸಲಹೆ ಪಡೆಯುವುದು ಒಳ್ಳೆಯದು.

ಕಿವಿಯಚ್ಚು ಹಾಕಿದಾಗ ಕಿವಿಯಲ್ಲಿ ಉರಿ ಅಥವಾ ನೋವು ಇದ್ದರೆ ಅಚ್ಚು ಮಾಡುವ ತಜ್ಞರ ಸಲಹೆ ಪಡೆಯಿರಿ. ಶ್ರವಣೋಪಕರಣ ಮಾರುವವರ ಬಳಿ ಅನೇಕ ವಿಧವಾದ ಶ್ರವಣೋಪಕರಣಗಳು ಮತ್ತು ಅದರ ಬಿಡಿ ಭಾಗಗಳು ಇರುತ್ತವೆ. ಶ್ರವಣೋಪಕರಣದ ಭಾಗಗಳು ಯಾವ ತರಹದ್ದು ಎಂದು ತಿಳಿದಿದ್ದರೆ ಬಿಡಿಭಾಗಗಳನ್ನು ಕೊಳ್ಳುವಾಗ ಉಪಯೋಗವಾಗುತ್ತದೆ. ಬರೆದಿಟ್ಟುಕೊಳ್ಳಬೇಕಾದ ವಿವರಗಳು.

1. ಶ್ರವಣೋಪಕರಣದ ಹೆಸರು.
2. ವಯರ್ V / Y / S.
3. 2 ಪಿನ್ನು / 3 ಪಿನ್ನಿನ ಸುರುಳಿ

*ಒಟ್ಟಿನಲ್ಲಿ ಶ್ರವಣೋಪಕರಣದ ಬಗ್ಗೆ ನೀವು ಗಮನವಿಡಬೇಕಾದ ವಿಷಯಗಳು:*

1. ಶ್ರವಣೋಪಕರಣವನ್ನು ಕೆಳಗೆ ಬೀಳಿಸಬಾರದು.

2. ರೇಡಿಯೋ, ದೂರದರ್ಶನ (ಟೆಲಿವಿಷನ್) ಮುಂತಾದ ಯಂತ್ರಗಳ ಮೇಲೆ ಇಡಬಾರದು.

3. ಬಿಸಿಲು ಬೀಳುವ ಜಾಗದಲ್ಲಿ ಇಡಬಾರದು.

4. ಶ್ರವಣೋಪಕರಣದ ರಿಸೀವರ್‌ಗಾಗಲೀ, ವಯರ್‌ಗಾಗಲೀ ಭಾರವಾಗಿ ತೂಗಲು ಅವಕಾಶ ಕೊಡಬಾರದು.

5. ಸಾಧನವನ್ನು ಪುಟ್ಟ ಮಕ್ಕಳಿಗೆ, ನಾಯಿ ಮತ್ತು ಬೆಕ್ಕುಗಳ ಮರಿಗಳಿಗೆ ಸಿಗದಂತಹ ಸ್ಥಳದಲ್ಲಿ ಇಡಬೇಕು.

6. ನೀವು ಚಿಕ್ಕಮಕ್ಕಳಿಗೆ ಶ್ರವಣೋಪಕರಣವನ್ನು ಕೊಂಡುಕೊಂಡರೆ ಅದನ್ನು ಬೀಳದಂತೆ ಇಡಲು ಒಂದು ಕಿಸೆಯನ್ನು ಚಿತ್ರದಲ್ಲಿ ತೋರಿಸಿರುವಂತೆ ಹೊಲಿಸಬೇಕು. ಶ್ರವಣೋಪಕರಣವನ್ನು ಧರಿಸುವಾಗ ಯಾವಾಗಲೂ ಜೇಬಿಗೆ ಸರಿಯಾಗಿ 'ಕ್ಲಿಪ್' ಮಾಡಿಕೊಳ್ಳಬೇಕು.



ಶ್ರವಣೋಪಕರಣ ಇಡಲು ಉಪಯೋಗಿಸುವ ಕಿಸೆ.
(Harness)

7. ಧೂಳು ಮತ್ತು ನೀರಿನಿಂದ ದೂರ ಇಡಬೇಕು.

8. ಆಕಸ್ಮಿಕವಾಗಿ ಶ್ರವಣೋಪಕರಣ ನೆನೆದರೆ ತಕ್ಷಣ ಬ್ಯಾಟರಿಯನ್ನು ಹೊರಗೆ ತೆಗೆದು, ನೀರನ್ನು ಸೋರಿಸಿ, ಒಣಗಿದ ಬಟ್ಟೆಯಿಂದ ಚೆನ್ನಾಗಿ ಒರೆಸಿ, ಒಣಗಿರುವ, ಬಿಸಿಯಿಲ್ಲದ ಜಾಗದಲ್ಲಿ ಇಡಬೇಕು.

9. ಮನೆಯಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಶ್ರವಣೋಪಕರಣವನ್ನು ಉಪಯೋಗಿಸುತ್ತಿದ್ದರೆ, ಒಂದರ ಬಿಡಿ ಭಾಗವನ್ನು ಮತ್ತೊಂದಕ್ಕೆ ತಜ್ಞರನ್ನು ಕೇಳದೆ ಬದಲಾಯಿಸಬೇಡಿ.

10. ಶ್ರವಣೋಪಕರಣವನ್ನು ಕಿವಿ ಕೇಳಿಸುವ ಮಕ್ಕಳಿಗೆ ಹಾಕಬೇಡಿ. ಇದರಿಂದ ಕಿವಿ ಕೇಳಿಸುವ ಮಕ್ಕಳೂ ಕಿವುಡರಾಗಬಹುದು.

11. ವರ್ಷಕ್ಕೊಮ್ಮೆ ಶ್ರವಣೋಪಕರಣವನ್ನು ತಜ್ಞರಿಂದ ಶುಚಿ ಮಾಡಿಸಿಕೊಳ್ಳಬೇಕು.

ಅನುಬಂಧ 4

## ಶ್ರವಣೋಪಕರಣಕ್ಕೆ ಹೊಂದಿಕೊಳ್ಳುವುದು

ಸರಿಯಾಗಿ ಹೊಂದುವ ಶ್ರವಣೋಪಕರಣವು ನಿಮ್ಮ ಹೊಸ ಜೀವನಕ್ಕೆ ನಾಂದಿಯಾಗಬಹುದು. ಈ ಉಪಕರಣ ಶ್ರವಣ ಶಕ್ತಿ ಕುಂದಿದವರನ್ನು ಮತ್ತೊಮ್ಮೆ ಶಬ್ದ ಪ್ರಪಂಚಕ್ಕೆ ಕರೆದೊಯ್ಯುವುದು.

ಧ್ವನಿ ವರ್ಧಕಗಳಂತೆ ಈ ಉಪಕರಣವೂ ಸಹ ಶಬ್ದಗಳ ಶಕ್ತಿಯನ್ನು ಹೆಚ್ಚಿಸುತ್ತದೆ. ಇದನ್ನು ಉಪಯೋಗಿಸುವುದರಿಂದ ಶ್ರವಣ ಶಕ್ತಿ ಕುಂದಿದವರೂ ಶಬ್ದಗಳನ್ನು ಕೇಳಿಸಿಕೊಳ್ಳಬಹುದು. ಎಷ್ಟೇ ಚೆನ್ನಾಗಿ ತಯಾರಿಸಲ್ಪಟ್ಟಿದ್ದರೂ, ಈ ಉಪಕರಣ ಕಿವಿಯ ಸಹಜ ಶಕ್ತಿಗೆ ಸಮವಾಗುವುದಿಲ್ಲ. ಶ್ರವಣೋಪಕರಣದಿಂದ ಹೊರಬರುವ ಶಬ್ದಗಳು ಸ್ವಾಭಾವಿಕವಾಗಿರದೇ ಇರುವುದರಿಂದ ಈ ಉಪಕರಣದ ಪೂರ್ಣ ಉಪಯೋಗ ಪಡೆಯಲು ನಿರಂತರ ಅಭ್ಯಾಸ ಅವಶ್ಯಕ. ಕೆಲವು ಕಾಲ ಉಪಯೋಗಿಸದ ನಂತರವೇ ಇದರಿಂದ ಫಲ ಸಿಗುವುದು.

### ಶ್ರವಣೋಪಕರಣದಿಂದ ಸಂಪೂರ್ಣ ಪ್ರಯೋಜನ ಪಡೆಯಲು ಕೆಲವು ಸಲಹೆಗಳನ್ನು ಕೊಡಲಾಗಿದೆ.

1. ಮೊದಲು ಈ ಉಪಕರಣವನ್ನು ಕೆಲವು ಗಂಟೆಗಳ ಕಾಲ ಉಪಯೋಗಿಸಿ. ಕ್ರಮೇಣ ಇದನ್ನು ಬಳಸುವ ಕಾಲವನ್ನು ಹೆಚ್ಚಿಸಿ, ಇಡೀ ದಿನ ಉಪಯೋಗಿಸಲು ಅಭ್ಯಾಸ ಮಾಡಿಕೊಳ್ಳಿ. ವಿಶೇಷ ಸಂದರ್ಭಗಳಲ್ಲಿ ಅಥವಾ ಸಂಭಾಷಣೆಗಾಗಿ ಮಾತ್ರ ಉಪಯೋಗಿಸಲು ಮೀಸಲಾಗಿಡಬೇಡಿ. ಹೆಚ್ಚು ಬಳಸಿದಷ್ಟೂ ಅದರಿಂದಾಗುವ ಉಪಯೋಗವೂ ಹೆಚ್ಚುತ್ತದೆ.

2. ಉಪಕರಣವನ್ನು ಉಪಯೋಗಿಸಲು ತೊಡಗಿದಾಗ ಮೊದಲಿಗೆ ಕಿವಿಯಲ್ಲಿ ತೊಂದರೆಯುಂಟಾಗಬಹುದು. ಅಭ್ಯಾಸದೊಂದಿಗೆ ಕಡಿಮೆಯಾಗುವುದು.



3. ಮೊದಲು ಹೆಚ್ಚು ಶಬ್ದವಿಲ್ಲದ ಕಡೆಗಳಲ್ಲಿ ಈ ಉಪಕರಣವನ್ನು ಉಪಯೋಗಿಸಿ. ಗಟ್ಟಿಯಾಗಿ ಓದಿ ನಿಮ್ಮ ಧ್ವನಿಗೆ ಹೊಂದಿಕೊಳ್ಳಿರಿ. ನಿಮ್ಮ ಮನೆಯ ಸುತ್ತಮುತ್ತ ಇರುವ ಶಬ್ದಗಳನ್ನು (ವಾರ್ತಾಪತ್ರಿಕೆಯನ್ನು ಮಡಚುವ ಶಬ್ದ, ನಾಯಿ ಬೊಗಳುವುದು, ಕರೆಗಂಟೆಯ ಧ್ವನಿ ಮುಂತಾದವುಗಳನ್ನು) ಕೇಳಿರಿ. ಈ ಶಬ್ದಗಳಿಗೆ ಹೊಂದಿಕೊಳ್ಳುವುದರಿಂದ ನೀವು ಇನ್ನೊಬ್ಬರೊಂದಿಗೆ ಮಾತನಾಡುತ್ತಿರುವಾಗ ಇವು ಅಡ್ಡಿ ಎನ್ನಿಸುವುದಿಲ್ಲ.

4. ಶಬ್ದಮಟ್ಟ ನಿಯಂತ್ರಕ (Volume Control) ಅನ್ನು ನಿಮಗೆ ಹಿತಕರವಾಗಿ ಕೇಳುವ ಹಾಗೆ ಸರಿಪಡಿಸಿಕೊಳ್ಳಿ. ಇದನ್ನು ಆಗಾಗ್ಗೆ ಬದಲಾಯಿಸಬೇಡಿರಿ. ಶಬ್ದವನ್ನು ಒಂದು ನಿರ್ದಿಷ್ಟ ಮಟ್ಟದಲ್ಲೇ ಇಟ್ಟು ಕೇಳಿಸಿಕೊಳ್ಳಲು ಅಭ್ಯಾಸ ಮಾಡಿಕೊಳ್ಳಿ.

ಹೆಚ್ಚಿನ ಶಬ್ದ ಮಟ್ಟಕ್ಕೆ ಇರಿಸಿದಾಗ



ನಿರ್ದಿಷ್ಟ ಶಬ್ದ ಮಟ್ಟಕ್ಕೆ ಇರಿಸಿದಾಗ



5. ಮೊದಲು ನಿಮ್ಮ ಕುಟುಂಬದ ಸದಸ್ಯರೊಬ್ಬರ ಹತ್ತಿರ ಸಂಭಾಷಿಸಲು ಅಭ್ಯಾಸ ಮಾಡಿಕೊಳ್ಳಿ. ಅವರು ನಿಮ್ಮೊಡನೆ ಸಹಜವಾಗಿ ಮಾತನಾಡುವುದು ಮುಖ್ಯ. ಅವರು ಬಹಳ ಗಟ್ಟಿಯಾಗಿ ಮಾತನಾಡುವುದು ಮತ್ತು ತುಟಿಗಳನ್ನು ಅಸಾಧಾರಣವಾಗಿ ಚಲಿಸುವುದು ಬೇಡ. ಮೊದಲು ಸಾಧಾರಣಕ್ಕಿಂತ ನಿಧಾನವಾಗಿ ಮಾತನಾಡುವುದರಿಂದ ಹೆಚ್ಚು ಸಹಾಯವಾಗಬಹುದು.

6. ಅಭ್ಯಾಸ ಮಾಡಿಕೊಳ್ಳುವಾಗ, ಫ್ಯಾನ್, ರೇಡಿಯೋ, ಟಿಲಿವಿಷನ್ ಇತ್ಯಾದಿಗಳನ್ನು ಆರಿಸಿ ಸಂಭಾಷಿಸುವುದು ಉತ್ತಮ. ತುಟಿಗಳ ಚಲನೆಯನ್ನು ಗಮನಿಸುವುದರಿಂದ ಈ ಉಪಕರಣದ ಪ್ರಯೋಜನವನ್ನು ಪೂರ್ಣವಾಗಿ ಪಡೆಯಬಹುದು. ಮಾತನವಾಡುವವರ ಮುಖದ ಮೇಲೆ ಬೆಳಕು ಬೀಳುವಂತಿರಲಿ. ಅವರ ಮುಖ ಮತ್ತು ತುಟಿಗಳ ಚಲನೆಯನ್ನು ಸೂಕ್ಷ್ಮವಾಗಿ ಗಮನಿಸಿ ಕೆಲದಿನಗಳ ಅಭ್ಯಾಸದ ನಂತರ ಅವರ ಮತ್ತು ನಿಮ್ಮ ನಡುವಿನ ಅಂತರವನ್ನು ಹೆಚ್ಚಿಸಿ.






7. ಕೇಳುವ ಸನ್ನಿವೇಶಗಳನ್ನು ಕ್ರಮೇಣ ಕಠಿಣವಾಗಿಸಿ. ಇಬ್ಬರು ಮೂವರ ಜೊತೆಗೆ ಸಂಭಾಷಿಸಲು ಪ್ರಯತ್ನಿಸಿ. ಒಬ್ಬೊಬ್ಬರು ಮಾತನಾಡುವುದನ್ನೂ ಗಮನಿಸಿ. ಆದರೆ ಪ್ರತಿಯೊಂದು ಪದವನ್ನೂ ಕೇಳಿಸಿಕೊಳ್ಳಲು ಶ್ರಮ ಪಡಬೇಡಿ. ಗುಂಪಿನಿಂದ ಅಡಿಗಳ ಅಂತರದಲ್ಲಿಯೇ ಇರಿ.



8. ಇತರ ಮುಂದಿನ ಹಂತದಲ್ಲಿ ಬೇರೆ ಬೇರೆ ಕೇಳುವ ಸಂದರ್ಭಗಳಿಗೆ ಹೊಂದಿಕೊಳ್ಳಿ. ರೇಡಿಯೋ, ಟೆಲಿವಿಷನ್‌ಗಳ ಧ್ವನಿಯನ್ನು ಸಾಧಾರಣ ಮಟ್ಟದಲ್ಲಿ ಇರಿಸಲು ನಿಮ್ಮ ಕುಟುಂಬದ ಸದಸ್ಯರಿಗೆ ಹೇಳಿ. ಇದೇ ಮಟ್ಟದಲ್ಲಿ ಕೇಳಲು ಅಭ್ಯಾಸ ಮಾಡಿಕೊಳ್ಳಿ.



9. ಶಬ್ದ ಯಾವ ಕಡೆಯಿಂದ ಬರುತ್ತದೆ ಎಂದು ಗಮನಿಸಿ. ನಾಯಿ ಬೊಗಳಿದಾಗ ಅಥವಾ ಸೈಕಲ್ಲಿನ ಗಂಟೆ ಬಾರಿಸಿದಾಗ ಅದು ಯಾವ ಕಡೆಯಿಂದ ಬಂದಿತು ಎಂದು ಕಂಡುಹಿಡಿಯಲು ಪ್ರಯತ್ನ ಮಾಡಿ. ಹೆಚ್ಚು ವಾಹನ ಸಂಚಾರವಿರುವ ರಸ್ತೆಯಲ್ಲಿ ಬೇರೆ ಬೇರೆ ವಾಹನಗಳು ಯಾವ ಯಾವ ಕಡೆಗಳಿಂದ ಬರುತ್ತಿದೆ ಎಂಬುದನ್ನು ಗುರುತಿಸಲು ಪ್ರಯತ್ನಿಸಿ.

10. ಕಠಿಣವಾದ ಸನ್ನಿವೇಶಗಳಲ್ಲಿ ನೀವು ದೃಷ್ಟಿಯನ್ನು ಆಧರಿಸಬೇಕಾಗುತ್ತದೆ. ಮಾರುಕಟ್ಟೆ, ರೈಲ್ವೆ, ಬಸ್ ನಿಲ್ದಾಣ ಮುಂತಾದ ಹೆಚ್ಚು ಗದ್ದಲವಿರುವ ಸ್ಥಳಗಳಲ್ಲಿ ಮಾತನಾಡುವವರ ಸಮೀಪದಲ್ಲಿಯೇ ನಿಂತು ಅವರ ತುಟಿಚಲನೆಯನ್ನು ಗಮನಿಸಿಕೊಳ್ಳಿ. ಹೋಟೆಲುಗಳ ಮಧ್ಯಭಾಗದಲ್ಲಿ, ಅಡಿಗೆ ಮನೆಯ ಪಕ್ಕದಲ್ಲಿ ಕುಳಿತುಕೊಳ್ಳದೆ ಹೆಚ್ಚು ಶಬ್ದವಿಲ್ಲದ ಮೂಲೆಗಳನ್ನು ಆಯ್ದುಕೊಳ್ಳಿರಿ. ಸಿನಿಮಾ ಮಂದಿರಗಳಲ್ಲಿ ಬಾಲ್ಕನಿಯ ಕೆಳಗೆ ಹಾಗೂ ಕಂಬಗಳ ಹಿಂದೆ ಕುಳಿತುಕೊಳ್ಳಬೇಡಿ. ಶಬ್ದದ ಅಲೆಗಳು ಕಂಬ, ಗೋಡೆ ಇಂತಹ ಗಟ್ಟಿಯಾದ ಭಾಗಗಳ ಮೇಲೆ ಬಿದ್ದಾಗ ಶಬ್ದಗಳು ವಿರೂಪಗೊಳ್ಳಬಹುದು. ಮೂಲೆಯಲ್ಲಿ ಕುಳಿತರೆ ಶಬ್ದದೊಂದಿಗೆ, ಮಾತನಾಡುವವರು ಕಾಣಿಸುವುದೂ ಕಡಿಮೆಯಾಗಬಹುದು.

ಶ್ರವಣೋಪಕರಣದಿಂದ ಬರುವ ಶಬ್ದಗಳಿಗೆ ಹೊಂದಿಕೊಳ್ಳುವುದಕ್ಕೆ ಸಹನೆಯೂ ಸತತ ಪ್ರಯತ್ನವೂ ಅತ್ಯಾವಶ್ಯಕ. ಬಳಕೆ ಹೆಚ್ಚಾಗುತ್ತಿದ್ದಂತೆ ನಿಮ್ಮ ಶ್ರವಣೋಪಕರಣದಿಂದ ಆಗುವ ಪ್ರಯೋಜನಗಳನ್ನು ನೀವು ಮೆಚ್ಚಿಕೊಳ್ಳುತ್ತೀರಿ. ಅದರೊಂದಿಗೆ ಅದರ ತೊಡಕುಗಳನ್ನೂ ಅರಿತುಕೊಳ್ಳುವಿರಿ. ಶ್ರವಣೋಪಕರಣದಿಂದ ಪೂರ್ಣ ಪ್ರಯೋಜನ ಪಡೆಯುವ ಕಲೆಯನ್ನು ಕರಗತ ಮಾಡಿಕೊಂಡರೆ ನೀವು ದೀರ್ಘಕಾಲ ಶಬ್ದವನ್ನು ಚೆನ್ನಾಗಿ ಕೇಳಿಸಿಕೊಳ್ಳಲು ಸಾಧ್ಯ.

ಅನುಬಂಧ 5

## ಶ್ರವಣೋಪಕರಣದ ತೊಂದರೆಗಳನ್ನು ಗುರುತಿಸಿ ನಿವಾರಿಸಿಕೊಳ್ಳುವುದು

ಶ್ರವಣೋಪಕರಣವನ್ನು ಉಪಯೋಗಿಸುತ್ತಿರುವವರು ಅದರ ಸಣ್ಣ ಪುಟ್ಟ ತೊಂದರೆಗಳನ್ನು ಗುರುತಿಸಿ, ಸರಿಪಡಿಸುವುದನ್ನು ಅರಿತಿರಬೇಕು. ಕೆಲವು ಸಾಮಾನ್ಯ ತೊಂದರೆಗಳು, ಅವುಗಳ ಮೂಲಗಳ ಮತ್ತು ಅವುಗಳನ್ನು ಸರಿಪಡಿಸುವ ವಿಧಾನಗಳನ್ನು ಕೆಳಗೆ ವಿವರಿಸಲಾಗಿದೆ.

### 1. ಶಬ್ದವಿಲ್ಲದಿರುವುದು.



ಶ್ರವಣೋಪಕರಣದ ನೆರವಿನಿಂದ ಯಾವುದೇ ಶಬ್ದಗಳು ಕೇಳಿಸದಿದ್ದಲ್ಲಿ ಕೆಳಗಿನಂತೆ ಪರೀಕ್ಷಿಸಿ.

ಅ. ಬ್ಯಾಟರಿಯನ್ನು ಸರಿಯಾಗಿ ಹಾಕಿದ್ದೀರಾ ಪರೀಕ್ಷಿಸಿ. ಅಂದರೆ ಬ್ಯಾಟರಿಯ ಚಿಹ್ನೆಯೂ ಯಂತ್ರದ ಚಿಹ್ನೆಯೂ ಒಂದೇ ಕಡೆಯಲ್ಲಿದೆಯೇ, ಎಂಬುದನ್ನು ನೋಡಿ, ಇಲ್ಲದಿದ್ದಲ್ಲಿ ಸರಿಯಾಗಿ ಜೋಡಿಸಿ.

ಆ. ಬ್ಯಾಟರಿಯಿಂದ ಏನಾದರೂ ದ್ರವ ಹೊರಬೀಳುತ್ತಿದೆಯೋ ಅಥವಾ ಬ್ಯಾಟರಿಯ ಅರೆಯ ಕೊನೆಗಳಿಗೆ ತುಕ್ಕು ಹಿಡಿದಿದೆಯೋ ಎಂದು ಪರೀಕ್ಷಿಸಿ. ಹಾಗಿದ್ದಲ್ಲಿ ಅರೆಯ ಕೊನೆಗಳನ್ನು ಇಥೈಲ್ ಆಲ್ಕೋಹಾಲ್ ಅಥವಾ ಕಾರ್ಬನ್ ಟೆಟ್ರಾಕ್ಲೋರೈಡ್ ಹಾಕಿ ಸ್ವಚ್ಛಪಡಿಸಿ.

ಇ. ಇದನ್ನೆಲ್ಲಾ ಪರೀಕ್ಷಿಸಿ, ಅವೆಲ್ಲಾ ಸರಿಯಾಗಿದ್ದೂ ಶಬ್ದ ಕೇಳದಿದ್ದಲ್ಲಿ, ಆ ಬ್ಯಾಟರಿಯನ್ನು ತೆಗೆದು ಹೊಸ ಬ್ಯಾಟರಿಯನ್ನು ಹಾಕಿ ಪುನಃ ಪರೀಕ್ಷಿಸಿ. ಈಗ ಶ್ರವಣೋಪಕರಣ ಸರಿಯಾಗಿ ಕೆಲಸ ಮಾಡಿದರೆ, ಅದು ಹಳೆ ಬ್ಯಾಟರಿಯ ಶಕ್ತಿ ಕಡಿಮೆಯಾಗಿದೆ ಎಂಬುದನ್ನು ಸೂಚಿಸುತ್ತದೆ. ಹೊಸ ಬ್ಯಾಟರಿಯನ್ನು ಹಾಕಿಯೂ ಅದು ಕೆಲಸ ಮಾಡದಿದ್ದಲ್ಲಿ ಶ್ರವಣೋಪಕರಣದ ಬೇರೆ ಭಾಗಗಳನ್ನು ಈ ಕೆಳಗಿನಂತೆ ಪರೀಕ್ಷಿಸಿ.

### 2. ವಯರ್

ಶ್ರವಣೋಪಕರಣವನ್ನು ಆನ್ ಮಾಡಿ, ರಿಸೀವರನ್ನು ನಿಮ್ಮ ಕಿವಿಯ ಬಳಿ ಇಟ್ಟುಕೊಂಡು, ವಯರ್‌ನ್ನು ನಿಮ್ಮ ಬೆರಳುಗಳ ಮಧ್ಯದಲ್ಲಿ ಹಿಡಿದುಕೊಂಡು ತಿರುಗಿಸಿ, ಈಗ ಶಬ್ದ ಬಿಟ್ಟು, ಬಿಟ್ಟು ಕೇಳಿದರೆ ವಯರ್‌ನ್ನು ಬದಲಿಸಿ, ಹೊಸ ವಯರ್‌ನ್ನು ಹಾಕಿರಿ. ಆಗಲೂ ಶ್ರವಣೋಪಕರಣ ಸರಿಯಾಗಿ ಕೆಲಸ ಮಾಡದಿದ್ದಲ್ಲಿ ಕಿವಿಯಚ್ಚನ್ನು ಪರೀಕ್ಷಿಸಿ.

### 3. ಕಿವಿಯಚ್ಚು



ಕಿವಿಯಚ್ಚು ಗುಗ್ಗೆಯಿಂದ, ಕೊಳೆಯಿಂದ ತುಂಬಿಕೊಂಡಿರಬಹುದು. ಆಗ ಅದನ್ನು ರಿಸೀವರಿನಿಂದ ಬೇರ್ಪಡಿಸಿ. ಉಗುರು ಬೆಚ್ಚಗಿನ ಸಾಬೂನು ನೀರಿನಲ್ಲಿ ಕಡ್ಡಿಯ

ಸಹಾಯದಿಂದ, ಕಿವಿಯಚ್ಚಿನ ಕಾಲುವೆಯನ್ನು ತೊಳೆಯಿರಿ. ಆ ಮೇಲೂ ಕೆಲಸ ಮಾಡದಿದ್ದಲ್ಲಿ ಉಪಕರಣದ ಒಳಗಿನ ಭಾಗಗಳಲ್ಲಿ ತೊಂದರೆ ಇರಬಹುದು. ಇದನ್ನು ವಿಶೇಷ ತರಬೇತಿ ಹೊಂದಿರುವವರ ಹತ್ತಿರ ದುರಸ್ತಿ ಪಡಿಸಿಕೊಳ್ಳಿ.

**4. ಕ್ಷೀಣವಾದ ಶಬ್ದ.**

ಕೆಲವೊಂದು ಶ್ರವಣೋಪಕರಣದಿಂದ ಬರುತ್ತಿರುವ ಶಬ್ದ ಕ್ಷೀಣವಾಗಿರಬಹುದು. ವಾಲ್ಯೂಮ್ ಕಂಟ್ರೋಲನ್ನು ತಿರುಗಿಸಿಯೂ ಅದು ಹಾಗೆಯೇ ಇರಬಹುದು. ಶಕ್ತಿ ಕುಂದಿದ ಬ್ಯಾಟರಿ, ಗುಗ್ಗೆ, ಕೊಳೆ ತುಂಬಿದ ಕಿವಿಯಚ್ಚು ಇದಕ್ಕೆ ಕಾರಣವಾಗಿರಬಹುದು. ಹೊಸ ಬ್ಯಾಟರಿಯನ್ನು ಹಾಕುವುದು ಮತ್ತು ಕಿವಿಯಚ್ಚನ್ನು ತೊಳೆದು ಸ್ವಚ್ಛ ಮಾಡುವುದರಿಂದ ಸರಿಪಡಿಸಬಹುದು.

**5. ವಿರೂಪಗೊಂಡ ಶಬ್ದ.**

ಜನರು ಕೆಲವೊಮ್ಮೆ ಶ್ರವಣೋಪಕರಣವನ್ನು ಬಟ್ಟೆಯಿಂದ ಮುಚ್ಚಿಡುತ್ತಾರೆ. ಇದು ಶಬ್ದವನ್ನು ಕಡಿಮೆ ಮಾಡುವುದಲ್ಲದೆ, ಶಬ್ದವನ್ನು ವಿರೂಪಗೊಳಿಸುತ್ತದೆ. ಏಕೆಂದರೆ ಬಟ್ಟೆ ಮೈಕ್ರೋಫೋನನ್ನು ಉಜ್ಜುತ್ತದೆ. ಇದರಿಂದ ಶಬ್ದವು ಉತ್ಪತ್ತಿಯಾಗಿ ಈ ಶಬ್ದವು ಮುಖ್ಯವಾದ ಶಬ್ದಗಳನ್ನು (ಉದಾ : ಮಾತು, ಹಾಡು) ಕೇಳದಂತೆ ಮಾಡುತ್ತದೆ. ಆದುದರಿಂದ ಶ್ರವಣೋಪಕರಣವನ್ನು ಉಪಯೋಗಿಸುವವರು ಅದರ ಮೈಕ್ರೋಫೋನನ್ನು ಬಟ್ಟೆಯಿಂದ ಮುಚ್ಚಬಾರದು.

ಶಕ್ತಿ ಕುಂದಿದ ಬ್ಯಾಟರಿಯೂ ಇದಕ್ಕೆ ಕಾರಣವಾಗಿರಬಹುದು. ಹೊಸ ಬ್ಯಾಟರಿಯನ್ನು ಹಾಕಿದರೆ, ಶ್ರವಣೋಪಕರಣ ಸರಿಯಾಗಿ ಕೆಲಸ ಮಾಡಬಹುದು. ಶಬ್ದ ವಿರೂಪಗೊಳ್ಳುವುದಕ್ಕೆ ಕೊಳಕು ಮತ್ತು ಮಣ್ಣಿನಿಂದ ಕೂಡಿದ ಮೈಕ್ರೋಫೋನ್, ತುಂಡಾದ ರಿಸೀವರ್, ಸಡಿಲಗೊಂಡ ಅಥವಾ ತುಂಡಾದ ಸ್ವಿಚ್‌ಗಳು ಕಾರಣವಾಗಿರಬಹುದು. ರಿಸೀವರ್‌ನ್ನು ನೀವೇ ಬದಲಾಯಿಸಬಹುದು. ಮೈಕ್ರೋಫೋನಿನ ಮೇಲ್ಭಾಗವನ್ನು ಒಣ ಬಟ್ಟೆಯಿಂದ ಸ್ವಚ್ಛಗೊಳಿಸಬಹುದು. ಸ್ವಿಚ್ಚುಗಳನ್ನು ತರಬೇತಿ ಹೊಂದಿದವರ ಬಳಿಯಲ್ಲಿಯೇ ಬದಲಾಯಿಸುವುದು ಒಳ್ಳೆಯದು.

**6. ತಡೆದು ತಡೆದು ಬರುವ ಶಬ್ದ.**

ಇದಕ್ಕೆ ಸಾಮಾನ್ಯ ಕಾರಣ, ಕತ್ತರಿಸಿ ಹೋದ ವಯರ್. ಹೊಸ ವಯರ್ ಹಾಕಿದರೆ ಅದು ಸರಿಯಾಗಬಹುದು.

ಬ್ಯಾಟರಿಯ ಕೊನೆಗಳಿಗೂ, ಶ್ರವಣೋಪಕರಣದ ಬ್ಯಾಟರಿಯ ಅರೆಯ ಕೊನೆಗಳಿಗೂ ಸರಿಯಾದ ಸಂಪರ್ಕವಿರದೇ ಇದ್ದರೂ ತೊಂದರೆ ಕಂಡುಬರುವುದು. ಬ್ಯಾಟರಿಯ ಉದ್ದ ಮತ್ತು ಬ್ಯಾಟರಿಯ ಅರೆಯ ಉದ್ದದಲ್ಲಿ ವ್ಯತ್ಯಾಸ ಇರುವುದೂ ಇದಕ್ಕೆ ಕಾರಣವಾಗಿರಬಹುದು. ನಿಮ್ಮ ಶ್ರವಣೋಪಕರಣಗಳಿಗೆ ಹೊಂದುವ ಬ್ಯಾಟರಿಗಳ ಬಗ್ಗೆ ನಿಮ್ಮ ಶ್ರವಣ ತಜ್ಞರನ್ನು ವಿಚಾರಿಸಿ.

**7. ಶ್ರವಣೋಪಕರಣಗಳಿಂದ ಹೊರಡುವ ಕೀರಲು ಶಬ್ದ.**

ಸಾಧಾರಣವಾಗಿ ರಿಸೀವರ್‌ನ್ನು ಮೈಕ್ರೋಫೋನಿನ ಹತ್ತಿರ ಇರಿಸಿದರೆ ಈ ರೀತಿಯ ಶಬ್ದ ಬರುತ್ತದೆ. ರಿಸೀವರ್‌ನ್ನು ಕಿವಿಯಚ್ಚಿಗೆ ಜೋಡಿಸಿ ಕಿವಿಯಲ್ಲಿಟ್ಟುಕೊಂಡಾಗಲೂ ಈ ಶಬ್ದ ಬಂದರೆ ಅದಕ್ಕೆ ಈ ಕೆಳಗಿನವುಗಳಲ್ಲೊಂದು ಕಾರಣವಾಗಿರಬಹುದು.



ಶ್ರವಣೋಪಕರಣದ ಮೈಕ್ರೋಫೋನ್ ಮತ್ತು ರಿಸೀವರಿನ ಅಂತರ ಕಡಿಮೆಯಾಗಿರಬಹುದು. ವಾಲ್ಯೂಮ್ ಬಹಳ ಜಾಸ್ತಿ ಇರಬಹುದು. ಕಿವಿಯಚ್ಚನ್ನು ರಿಸೀವರಿಗೆ ಸರಿಯಾಗಿ ಜೋಡಿಸದೇ ಇರಬಹುದು ಅಥವಾ ಕಿವಿಯಚ್ಚು ಕಿವಿಗೆ ಸರಿಯಾಗಿ ಹೊಂದದೇ ಇರಬಹುದು.

ಶ್ರವಣೋಪಕರಣವನ್ನು ಇನ್ನಷ್ಟು ಕೆಳಗೆ ತರುವುದರಿಂದ ಈ ಶಬ್ದ ನಿಲ್ಲುವುದು. ಒಂದೇ ಕಿವಿಗೆ ಉಪಯೋಗಿಸುತ್ತಿದ್ದ ಪಕ್ಷದಲ್ಲಿ ಶ್ರವಣೋಪಕರಣವನ್ನು ಮತ್ತೊಂದು ಬದಿಗೆ ಬದಲಾಯಿಸುವುದು ಉತ್ತಮ. (ಉದಾಹರಣೆಗೆ ರಿಸೀವರ್‌ನ್ನು ಎಡ ಕಿವಿಗೆ ಹಾಕುತ್ತಿದ್ದಲ್ಲಿ ಶ್ರವಣೋಪಕರಣವನ್ನು ಬಲಬದಿಗೆ ಧರಿಸಬಹುದು). ಇದು ಕೀರಲು ಶಬ್ದ ಬರಲು ಕಾರಣವಾಗದಿದ್ದಲ್ಲಿ ವಾಲ್ಯೂಮ್ ಕಂಟ್ರೋಲನ್ನು ಪರೀಕ್ಷಿಸಿ. ವಾಲ್ಯೂಮ್ ಹೆಚ್ಚಾಗಿದ್ದರೆ ಶಬ್ದಗಳು ಜೋರಾಗಿ ಕೇಳಿಸುವುದರಿಂದ ಸಹಿಸಲು ಸಾಧ್ಯವಾಗುವುದಿಲ್ಲ ಮತ್ತು ಶಬ್ದಗಳನ್ನು ಗುರುತಿಸುವುದೂ ಕಷ್ಟವಾಗಬಹುದು. ವಾಲ್ಯೂಮ್ ಅನ್ನು ಕಡಿಮೆ ಮಾಡಿದ ನಂತರವೂ ಕೀರಲು ಶಬ್ದ ಬರುವುದು ನಿಲ್ಲದಿದರೆ, ಕಿವಿಯಚ್ಚನ್ನು ಪರೀಕ್ಷಿಸಿ. ಇನ್ನೂ ಶಬ್ದ ಬರುವುದು ನಿಲ್ಲದಿದ್ದರೆ ಕಿವಿಯಚ್ಚು ಸರಿಯಾಗಿ ಹೊಂದುತ್ತದೆಯೇ ಎಂದು ನೋಡಿ. ಸಡಿಲವಾಗಿದ್ದಲ್ಲಿ ಹೊಸ ಕಿವಿಯಚ್ಚನ್ನು ಮಾಡಿಸಿ. ರಿಸೀವರ್ ಮತ್ತು ಕಿವಿಯಚ್ಚು ಸರಿಯಾಗಿ ಜೋಡಿಸಲ್ಪಟ್ಟಿದೆಯೇ ಎಂದು ನೋಡಿ. ಜೋಡಣೆ ಸರಿಪಡಿಸುವುದು ಅಥವಾ ರಿಸೀವರಿನಲ್ಲಿ ವಾಷರ್ ಹಾಕುವುದರಿಂದ ಈ ಸಮಸ್ಯೆ ಪರಿಹಾರವಾಗುತ್ತದೆ. ಈ ತೊಂದರೆಗಳನ್ನು ಪರಿಹರಿಸುವುದಕ್ಕೆ ಕಿವಿಯಚ್ಚು ತಯಾರಿಸುವವರು ಸಹಾಯ ಮಾಡುತ್ತಾರೆ.

ಈ ಕೆಳಗಿನವುಗಳು ನೆನಪಿನಲ್ಲಿಬೇಕಾದ ಅಂಶಗಳು. ಇವುಗಳು ಸಮಸ್ಯೆಗಳನ್ನು ಕಡಿಮೆ ಮಾಡಲು ಸಹಾಯವಾಗುತ್ತದೆ.

ಅ. ಶ್ರವಣೋಪಕರಣವನ್ನು ಹೆಚ್ಚು ಸಮಯ ಉಪಯೋಗಿಸದಿದ್ದರೆ, ಬ್ಯಾಟರಿಯನ್ನು ಅದರಿಂದ ತೆಗೆದಿಡಿ. ಸಾಧ್ಯವಾದಷ್ಟು ಲೀಕ್ ಪ್ರೂಫ್ ಬ್ಯಾಟರಿಗಳನ್ನೇ ಉಪಯೋಗಿಸಿ. ಬ್ಯಾಟರಿಗಳನ್ನು ತೆಗೆದುಕೊಳ್ಳುವಾಗ ಅವು ಹೊಸದೇ ಎಂದು ವಿಚಾರಿಸಿ ತೆಗೆದುಕೊಳ್ಳಿ.

ಆ. ವಯರನ್ನು ಶ್ರವಣೋಪಕರಣದ ಸುತ್ತಲೂ ಗಟ್ಟಿಯಾಗಿ ಸುತ್ತಿಡಬೇಡಿ. ಇದು ವಯರ್ ತುಂಡಾಗಲು ಕಾರಣವಾಗುತ್ತದೆ.

ಇ. ವಯರ್‌ನ್ನು ಆಗಾಗ್ಗೆ ತೆಗೆದು, ಹಾಕಿ ಮಾಡಬೇಡಿ. ಅದರ ಪಿನ್ನುಗಳು ತುಂಬಾ ಸೂಕ್ಷ್ಮವಾಗಿರುವುದರಿಂದ ಅವುಗಳು ಮುರಿಯಬಹುದು.

ಈ. ಶ್ರವಣೋಪಕರಣವನ್ನು ಅಥವಾ ರಿಸೀವರ್‌ನ್ನು ಕೆಳಗೆ ಬೀಳಿಸಬೇಡಿರಿ.

ಉ. ಆಹಾರ, ನೀರನ್ನು ಶ್ರವಣೋಪಕರಣದ ಮೇಲೆ ಹಾಕಬೇಡಿ. ಸಣ್ಣ ಮಕ್ಕಳಿಗೆ ಆಹಾರ ತಿನ್ನಿಸುವಾಗ ಶ್ರವಣೋಪಕರಣವನ್ನು ಬೆನ್ನಿನ ಮೇಲೆ ಸಿಕ್ಕಿಸಿ.

ಊ. ಆಗಾಗ ಶ್ರವಣೋಪಕರಣವನ್ನು ಸ್ವಚ್ಛಗೊಳಿಸಿರಿ.

ಋ. ಕಿವಿಯಚ್ಚನ್ನು ಎರಡು ದಿನಕ್ಕೊಮ್ಮೆ ಸ್ವಚ್ಛಗೊಳಿಸಿರಿ. ಸರಿಯಾಗಿ ಒಣಗಿಸಿದ ಬಳಿಕ ರಿಸೀವರಿಗೆ ಜೋಡಿಸಿರಿ.

ೠ. ಶ್ರವಣೋಪಕರಣವನ್ನು ಕನಿಷ್ಠ ಪಕ್ಷ ಒಂದು ವರ್ಷಕ್ಕೊಮ್ಮೆ ಪರೀಕ್ಷೆ ಮಾಡಿಸಿರಿ.

ಅನುಬಂಧ 6

## ತರಗತಿಯಲ್ಲಿ ಶ್ರವಣಶಕ್ತಿಯ ತೊಂದರೆಯಿರುವ ಮಗು : ಉಪಾಧ್ಯಾಯರಿಗೆ ಸಲಹೆ ಸೂಚನೆಗಳು

**ಪ್ರಿಯ ಉಪಾಧ್ಯಾಯರೆ,**

ಶಾಲಾ ಉಪಾಧ್ಯಾಯರಾದ ನೀವು ಮಕ್ಕಳ ಶ್ರವಣ ಶಕ್ತಿಯ ಬಗ್ಗೆ ಕಾಳಜಿ ವಹಿಸಬೇಕಾಗಿದೆ. ಮಾನವನಿಗೆ ಕೇಳುವುದರ ಮೂಲಕ ಹೆಚ್ಚಿನ ಜ್ಞಾನಾರ್ಜನೆ ಉಂಟಾಗುತ್ತದೆ. ಶ್ರವಣ ಶಕ್ತಿಯಲ್ಲಿ ನ್ಯೂನತೆಗಳಿದ್ದರೆ ಮಕ್ಕಳು ಕಲಿಯುವಲ್ಲಿ ಹಿಂದುಳಿಯುತ್ತಾರೆ. ಕೆಲವು ಕಲಿಕೆಯ ನ್ಯೂನತೆಗಳಿಗೆ ಕಿವಿಯ ತೊಂದರೆಗಳು ಕಾರಣವಾಗಬಹುದು. ಕಿವಿಯ ರೋಗಗಳಿಂದಲೂ ಶ್ರವಣಶಕ್ತಿ ವಿವಿಧ ಪ್ರಮಾಣದಲ್ಲಿ ಕುಂದಬಹುದು.

ನಿಮ್ಮ ತರಗತಿಯಲ್ಲಿ ಯಾವುದಾದರೊಂದು ಮಗುವಿಗೆ ಕಿವಿ ಸರಿಯಾಗಿ ಕೇಳಿಸದೆ ಇರಬಹುದು. ಅಂತಹ ಮಗುವಿನ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಕೆಲವು ಲಕ್ಷಣಗಳು ಕಂಡುಬರಬಹುದು.

1. ಕಿವಿ ನೋವು, ಕಿವಿ ಸೋರುವಿಕೆ, ತಲೆಸುತ್ತುವಿಕೆ, ಮುಂತಾದ ತೊಂದರೆಗಳಿಂದ ಆಗಾಗ್ಗೆ ನರಳುತ್ತಿರುವುದು.

2. ಮಾತನಾಡುವಾಗ ತಪ್ಪುಗಳನ್ನು ಮಾಡುವುದು. ಕೆಲವು ಶಬ್ದಗಳನ್ನು ಅಥವಾ ಅಕ್ಷರಗಳನ್ನು ಸಂಪೂರ್ಣ ಬಿಟ್ಟುಬಿಡುವುದು ಅಥವಾ ಒಂದು ಶಬ್ದದ ಬದಲಿಗೆ ಮತ್ತೊಂದನ್ನು ಸೇರಿಸಿ ಆಡುವುದು.

ಉದಾ: "ಸೂರ್ಯ" ಎನ್ನುವಲ್ಲಿ "ತೂರ್ಯ" ಅಥವಾ "ತೂಯ" ಎನ್ನುವುದು ಇತ್ಯಾದಿ.

3. ಪ್ರಶ್ನೆಗಳನ್ನು ಕೇಳಿದಾಗ ಅರ್ಥವಾಗದೆ ಉತ್ತರ ಕೊಡದೆ ಇರಬಹುದು. ಅಥವಾ ತಪ್ಪು ಉತ್ತರ ಕೊಡಬಹುದು. ಆಟ ಆಡುವಾಗ ಅಥವಾ ದೈಹಿಕ ಶಿಕ್ಷಣ ತರಗತಿಯಲ್ಲಿ ಶಿಕ್ಷಕರು ಕೊಡುವ ಸೂಚನೆಗಳು ಅರ್ಥವಾಗದೆ ಸುಮ್ಮನೆ ಇತರರನ್ನು ಅನುಸರಿಸಬಹುದು.

4. ತರಗತಿಯಲ್ಲಿ ಪ್ರಶ್ನೆಗಳನ್ನು ಕೇಳಿದಾಗ, ಅರ್ಥವಾಗದೆ ಪದೇ ಪದೇ ಹೇಳುವಂತೆ ಕೇಳಬಹುದು. ಸಾಮಾನ್ಯವಾಗಿ ಪಾಠವನ್ನು ಒಂದೇ ಸಾರಿ ಕೇಳಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗದೆ ಇರಬಹುದು. ಉಪಾಧ್ಯಾಯರ ಮುಖವನ್ನು ದಿಟ್ಟಿಸಿ ನೋಡಿದರೆ ಮಾತ್ರ ಅರ್ಥ ಮಾಡಿಕೊಳ್ಳಲು ಸುಲಭವಾಗಬಹುದು.

5. ಮಾತನಾಡುವಾಗ ಮುಖವನ್ನೇ ಗಮನಿಸುತ್ತಿರುವುದು. ಮಾತನ್ನು ಅರ್ಥ ಮಾಡಿಕೊಳ್ಳಲು ತುಂಬ ಕಷ್ಟಪಡುವುದು.

6. ಧ್ವನಿ ಅಥವಾ ಶಬ್ದ ಎಲ್ಲಿಂದ ಬಂತು, ಯಾರು ಮಾತನಾಡಿದರು ಎನ್ನುವುದು ಗೊತ್ತಾಗದೆ ಸುತ್ತಮುತ್ತ ತಿರುಗಿ ನೋಡುತ್ತಿರುವುದು.

7. ಅತಿ ಗಟ್ಟಿಯಾಗಿ ಇಲ್ಲವೇ ಅತಿ ಮೆತ್ತಗಿನ ಧ್ವನಿಯಲ್ಲಿ ಮಾತನಾಡುವುದು.

8. ತರಗತಿಯ ಚಟುವಟಿಕೆಗಳಲ್ಲಿ ಹೆಚ್ಚಿನ ತೊಂದರೆ ಅನುಭವಿಸುವುದು. ವಿಶೇಷವಾಗಿ ಉಕ್ತಲೇಖನದಂತಹ ಕೇಳಿಸಿಕೊಂಡೇ ಮಾಡುವಂತಹ ಕೆಲಸ ತುಂಬ ಕಷ್ಟವೆನಿಸುವುದು.

9. ಸರಿಯಾಗಿ ಗಮನವಿಟ್ಟು ಪಾಠ ಕೇಳುತ್ತಿಲ್ಲವೆಂದು ತೋರಬಹುದು.

## ಶ್ರವಣ ಶಕ್ತಿಯ ತೊಂದರೆ ಇರುವ ಮಗುವಿಗೆ ನೀವು ಸಹಾಯ ಮಾಡಬಹುದು



ನಿಮ್ಮ ತರಗತಿಯಲ್ಲಿ ಇಂತಹ ಮಗುವೇನಾದರೂ ಕಂಡು ಬಂದಾಗ ತಡಮಾಡದೆ ಮಗುವಿನ ತಾಯಿ ತಂದೆಯರನ್ನು ಅಥವಾ ಪೋಷಕರನ್ನು ಕರೆಸಿ, ಮಗುವನ್ನು ವಾಕ್-ಶ್ರವಣ ಚಿಕಿತ್ಸಾಲಯಕ್ಕೆ ಕರೆದುಕೊಂಡು ಹೋಗಲು ತಿಳಿಸಿ. ಕಿವಿ ನೋವು ಅಥವಾ ಕಿವಿ ಸೋರುತ್ತಿದ್ದರೆ, ಕಿವಿ, ಮೂಗು, ಗಂಟಲ ತಜ್ಞರನ್ನು ಭೇಟಿಮಾಡಲು ತಿಳಿಸಿರಿ.

ಮಗುವಿಗೆ ಸೂಕ್ತ ಚಿಕಿತ್ಸೆ ದೊರಕುವ ತನಕ, ನಿಮ್ಮ ತರಗತಿಯಲ್ಲಿ ಈ ಕೆಳಗೆ ಸೂಚಿಸಿರುವ ರೀತಿಯಲ್ಲಿ ಸಹಾಯ ಮಾಡಬಹುದು.

1. ತರಗತಿಯಲ್ಲಿ ಮಗುವನ್ನು ಮುಂದಿನ ಸಾಲಿನಲ್ಲಿ ಕೂರಿಸಿ. ನಿಮ್ಮ ಚಲನೆಯ ಪರಶೀಲನೆಯಿಂದ ನೀವು ಹೇಳಿದ್ದನ್ನು ಅರ್ಥಮಾಡಿಕೊಳ್ಳಲು ಶಕ್ತವಾಗುತ್ತದೆ. ವಿದ್ಯಾರ್ಥಿಗಳಿಗೆ ಮನೆಗೆಲಸ (Home Work) ಮುಂತಾದ ಪ್ರಮುಖ ವಿಷಯಗಳನ್ನು ಹೇಳುವಾಗ ನೀವು ಹೇಳುವುದನ್ನು ಗಮನವಿಟ್ಟು ಕೇಳುತ್ತಿದೆಯೇ ಎಂಬುದನ್ನು ಖಾತ್ರಿ ಮಾಡಿಕೊಳ್ಳಿರಿ. ಅಗತ್ಯವಿದ್ದಲ್ಲಿ, ತರಗತಿ ಬಿಟ್ಟ ನಂತರ ಮಗುವನ್ನು ಮಾತನಾಡಿಸಿ ತರಗತಿಯಲ್ಲಿ ಹೇಳಿದ ವಿಶೇಷ ವಿಷಯಗಳು ಅರ್ಥವಾಯಿತೇ ಎಂಬುದನ್ನು ಖಚಿತಪಡಿಸಿಕೊಳ್ಳಿ.

ನಿಮ್ಮ ತರಗತಿಯಲ್ಲಿ ವಾಕ್-ಶ್ರವಣ ತಜ್ಞರಿಂದ ಪರೀಕ್ಷಿಸಲ್ಪಟ್ಟ, ಶ್ರವಣದೋಷ ಇರುವ ಮಕ್ಕಳನ್ನು ಅವರು ಬಳಸುವ ಶ್ರವಣೋಪಕರಣದಿಂದ ಸುಲಭವಾಗಿ ಗುರುತಿಸಬಹುದು. ಅಂತಹ ಮಕ್ಕಳು ತರಗತಿಯಲ್ಲಿ ಹಾಗೂ ಶಾಲೆಯಲ್ಲಿ ಹೆಚ್ಚಿನ ಪ್ರಯೋಜನ ಪಡೆಯಲು ನೀವು ಈ ಕೆಳಕಂಡಂತೆ ಸಹಾಯ ಮಾಡಬಹುದು.

(ಅ) ಶ್ರವಣೋಪಕರಣವನ್ನು ಮಗು ಸರಿಯಾಗಿ ಹಾಕಿಕೊಂಡಿದೆ ಮತ್ತು ಅದು ಸರಿಯಾಗಿ ಕೆಲಸ ಮಾಡುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳಿ.

(ಆ) ಹೊರಾವರಣದಲ್ಲಿ ಆಟವಾಡುವಾಗ ಶ್ರವಣೋಪಕರಣವನ್ನು ಸುರಕ್ಷಿತವಾದ ಸ್ಥಳದಲ್ಲಿ ತೆಗೆದಿಡಲು ನೆರವಾಗಿ.

(ಇ) ತರಗತಿಯಲ್ಲಿ ಇತರ ಮಕ್ಕಳಿಗೆ ಶ್ರವಣೋಪಕರಣದ ಬಗ್ಗೆ, ಅದರ ಪ್ರಯೋಜನದ ಬಗ್ಗೆ ಹಾಗೂ ಅದು ಎಷ್ಟು ಸೂಕ್ಷ್ಮವಾದ ಯಂತ್ರ ಎಂಬುದನ್ನು ತಿಳಿ ಹೇಳಿ. ಇದರಿಂದ ಮಕ್ಕಳು ಆ ಮಗುವನ್ನು ಛೇಡಿಸುವುದಾಗಲೀ, ಶ್ರವಣೋಪಕರಣವನ್ನು ಹಾಳುಮಾಡುವುದಾಗಲೀ, ಮಾಡುವುದಿಲ್ಲ.

2.ಮಗುವಿಗೆ ಶ್ರವಣದೋಷವಿದ್ದರೂ, ಶ್ರವಣೋಪಕರಣ ಬಳಸದೆ ಇದ್ದಲ್ಲಿ, ಮಗುವಿನ ತಂದೆ ತಾಯಿಯರಿಗೆ ಅದರ ಅವಶ್ಯಕತೆ ಬಗ್ಗೆ ತಿಳುವಳಿಕೆ ನೀಡಿ. ಶ್ರವಣೋಪಕರಣವನ್ನು ಪಡೆಯಲು ಸರ್ಕಾರ ನೆರವು ನೀಡುವುದು.

3. ಪಾಠ ಕೇಳಲು ಪ್ರಯತ್ನಿಸುವಾಗ ಶ್ರವಣ ಶಕ್ತಿಯ ತೊಂದರೆ ಇರುವ ಮಗು ಬೇಗ ಆಯಾಸಗೊಳ್ಳುತ್ತದೆ. ಗಮನವಿಟ್ಟು ಕೇಳುತ್ತಿಲ್ಲವೆಂದು ಶಿಕ್ಷಿಸುವುದು ಸರಿಯಲ್ಲ.

4. ಸಂಗೀತ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ಮಗುವನ್ನು ಪ್ರೋತ್ಸಾಹಿಸಿ. ಇದರಿಂದ ಲಯಬದ್ಧವಾಗಿ ಮಾತನಾಡಲು ಅನುಕೂಲವಾಗುವುದಲ್ಲದೆ ಶ್ರವಣ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಸಹಾಯವಾಗುತ್ತದೆ.

5. ತರಗತಿಯಲ್ಲಿ ಬೇರೆ ಮಕ್ಕಳು ಮಾತನಾಡುವಾಗ ಅಥವಾ ಪದ್ಯ ಹೇಳುವಾಗ, ಅವರ ಮುಖವನ್ನು ಗಮನಿಸಲು ಶ್ರವಣ ಶಕ್ತಿಯ ತೊಂದರೆ ಇರುವ ಮಗುವಿಗೆ ಅವಕಾಶ ನೀಡಿ.

6. ತರಗತಿಯ ಹಾಗೂ ಇತರ ಪಠ್ಯೇತರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೋತ್ಸಾಹಿಸಿ.

7. ವರ್ಷಕ್ಕೆ ಒಂದು ಭಾರಿಯಾದರೂ, ವಾಕ್ ಶ್ರವಣ ಚಿಕಿತ್ಸಾಲಯದಲ್ಲಿ ಪುನಃ ಪರೀಕ್ಷೆ ಮಾಡಿಸಿಕೊಳ್ಳಲು ಪೋಷಕರಿಗೆ ನೆನಪಿಸಿ.

8. ತರಗತಿಯಲ್ಲಿ ಮಗುವನ್ನು ಹೊರಗಿನ ಶಬ್ದಗಳಿಂದ ದೂರವಿರುವ ಸ್ಥಳದಲ್ಲಿ ಕೂಡಿಸಿ. ಉದಾ: ಹೆಚ್ಚು ಗದ್ದಲವಿರುವ, ರಸ್ತೆಯ ಕಡೆ ಇರುವ ಕಿಟಕಿಯಿಂದ ದೂರ ಕೂರಿಸಿ.

## ಗದ್ದಲವಿರುವ ವಾತಾವರಣದಲ್ಲಿ ಮಾತನ್ನು ಕೇಳಿಸಿಕೊಳ್ಳುವುದು

ಹೆಚ್ಚು ಗದ್ದಲವಿರುವ ಸ್ಥಳಗಳಲ್ಲಿ ಇತರರು ಆಡಿದ ಮಾತನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ತರಗತಿಯಲ್ಲಿ ಗದ್ದಲವಿರಬಹುದು, ತರಗತಿಯು ಹೆಚ್ಚು ವಾಹನಗಳು ಓಡುವ ರಸ್ತೆಯ ಪಕ್ಕದಲ್ಲೋ ಅಥವಾ ಆಟದ ಮೈದಾನದ ಪಕ್ಕದಲ್ಲೋ ಇರಬಹುದು. ಅಂತಹ ಸಂದರ್ಭದಲ್ಲಿ ನಿಮಗೇ ಕೆಲವೊಮ್ಮೆ ವಿದ್ಯಾರ್ಥಿಗಳು ಹೇಳಿದ ಉತ್ತರವನ್ನೋ ಅಥವಾ ಪದ್ಯವನ್ನೋ ಸರಿಯಾಗಿ ಕೇಳಿಸಿಕೊಳ್ಳಲು ಸಾಧ್ಯವಾಗದಿರಬಹುದು. ಅಂತೆಯೇ ಚೆನ್ನಾಗಿ ಕಿವಿ ಕೇಳುವ ಮಕ್ಕಳಿಗೂ ಸುತ್ತಲೂ ಗದ್ದಲದ ಕಾರಣ ತರಗತಿಯಲ್ಲಿ ಪಾಠವನ್ನು ಕೇಳಿ ಅರ್ಥಮಾಡಿಕೊಳ್ಳಲು ಕಷ್ಟವಾಗುತ್ತದೆ.

ಚೆನ್ನಾಗಿ ಕೇಳಿಸದ ಕಾರಣ, ಪಾಠಗಳು ಮೊದಲ ಸಾಲುಗಳಲ್ಲಿ ಕುಳಿತಿರುವ ವಿದ್ಯಾರ್ಥಿಗಳಿಗೆ ಅರ್ಥವಾಗುವಷ್ಟು ಸುಲಭವಾಗಿ ಕೊನೆಯ ಸಾಲುಗಳಲ್ಲಿ ಕುಳಿತಿರುವವರಿಗೆ ಅರ್ಥವಾಗದೆ ಹೋಗಬಹುದು. ತರಗತಿಯಲ್ಲಿ ನಿಮ್ಮ ಹಾಗೂ ವಿದ್ಯಾರ್ಥಿಗಳ ಮಧ್ಯೆ ದೂರ ಹೆಚ್ಚಿದಷ್ಟು ನೀವು ಆಡುವ ಮಾತು ಮೆದುವಾಗಿ ಕೇಳಿಸುತ್ತದೆಯಾದ ಕಾರಣ ಗದ್ದಲವಿರುವಾಗ ಹೇಳಿದ ಪಾಠಗಳು ಅರ್ಥವಾಗುವುದು ಕಠಿಣವಾಗುತ್ತದೆ. ನಿಮ್ಮ ಮಾತುಗಳನ್ನು ಕೇಳಿಸಿಕೊಳ್ಳುವುದರ ಜೊತೆಗೆ, ನಿಮ್ಮನ್ನು ನೋಡುವುದರಿಂದ ಮಕ್ಕಳಿಗೆ ಪಾಠಗಳನ್ನು ಅರ್ಥಮಾಡಿಕೊಳ್ಳಲು ಸುಲಭ ಸಾಧ್ಯವಾಗುತ್ತದೆ.

ಈ ಕೆಳಕಂಡ ಕೆಲವು ವಿಧಾನವನ್ನು ಅನುಸರಿಸಿದರೆ ಕಷ್ಟಕರ ಸನ್ನಿವೇಶಗಳಲ್ಲಿ ನೀವು ಮಕ್ಕಳಿಗೆ ಕೇಳಿಸಿಕೊಳ್ಳಲು ನೆರವು ನೀಡಬಹುದು. ಮಕ್ಕಳು ನಿಮ್ಮ ತುಟಿಗಳ ಚಲನೆ ಮತ್ತು ಮುಖ ಭಾವಗಳನ್ನು ಗಮನಿಸುತ್ತಿರುವರೇ ಎಂಬುದನ್ನು ಖಾತರಿಪಡಿಸಿಕೊಳ್ಳಿ.

(ಅ) ಪಾಠ ಮಾಡುವಾಗ ತರಗತಿಯ ಕಡೆ ಮುಖ ಮಾಡಿ ಮಾತನಾಡಿ, ಕಪ್ಪು ಹಲಗೆಯ ಮೇಲೆ ಬರೆಯುವಾಗ ಮಾತನಾಡುವುದನ್ನು ತಪ್ಪಿಸಿ.

(ಆ) ಆದಷ್ಟು ಬೆಳಕು ನಿಮ್ಮ ಮುಖದ ಮೇಲೆ ಬೀಳುವಂತೆ ನೋಡಿಕೊಳ್ಳಿ. ಹೆಚ್ಚು ಬೆಳಕು ನಿಮ್ಮ ಮುಖದ ಮೇಲೆ ಬಿದ್ದಾಗ, ತುಟಿಗಳ ಚಲನೆ ಮತ್ತು ಮುಖಭಾವಗಳನ್ನು ಗಮನಿಸುವುದು ಸುಲಭ. ನಿಮ್ಮ ಮುಖದ ಮೇಲೆ ನೆರಳು ಬಿದ್ದರೆ, ತುಟಿಗಳ ಚಲನೆಯ ಮೂಲಕ ಮಾತನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಕಷ್ಟವಾಗುತ್ತದೆ.

(ಇ) ಕಿಟಕಿಗೆ ಬೆನ್ನು ಮಾಡಿಕೊಂಡು ನಿಲ್ಲುವುದಾಗಲಿ ಅಥವಾ ಬೆಳಕು ಬರುವ ಜಾಗದಲ್ಲಿ ಅಡ್ಡವಾಗಿ ನಿಲ್ಲುವುದನ್ನು ತಪ್ಪಿಸಿರಿ.

(ಈ) ನೀವು ಮಾತನಾಡುವಾಗ, ನಿಮ್ಮ ಮುಖದ ಯಾವ ಭಾಗವನ್ನೂ ಮುಚ್ಚಿಕೊಳ್ಳಬೇಡಿ.

(ಉ) ಒಂದೇ ಕಡೆ ನಿಂತುಕೊಂಡು ಮಾತನಾಡಿ. ಮಾತನಾಡುವಾಗ ಅತ್ತಿಂದಿತ್ತ ಸುತ್ತಾಡುತ್ತಾ ಮಾತನಾಡುವುದು ಬೇಡ.

(ಊ) ಯಾವಾಗಲೂ ಮಾತನಾಡುವಂತೆಯೇ ಮಾತನಾಡಿ. ಆಯಾ ಪದಗಳನ್ನು ಉಚ್ಚಾರ ಮಾಡುವಾಗ ಸ್ವಾಭಾವಿಕವಾಗಿಯೇ ಉಚ್ಚರಿಸಿದರೆ ಅದನ್ನು ಹಾಗೆಯೇ 'ನೋಡಿ' ಕಲಿತುಕೊಳ್ಳುವುದು ಸುಲಭ. ತುಟಿ, ನಾಲಿಗೆಯ ಚಲನೆಯಲ್ಲಿ ಎಂದೂ ವಿಪರೀತಕ್ಕೆ ಹೋಗುವುದು ಬೇಡ.

## ಕಿವುಡುತನವನ್ನು ತಡೆಗಟ್ಟುವಿಕೆ

ಮಕ್ಕಳಿಗೆ ಶ್ರವಣ ಶಕ್ತಿಯ ತೊಂದರೆ ಉಂಟಾಗುವುದನ್ನು ತಡೆಗಟ್ಟಲು ಈ ಕೆಳಕಂಡ ಅಂಶಗಳನ್ನು ನೀವು ಗಮನದಲ್ಲಿಟ್ಟುಕೊಳ್ಳಬೇಕಾದುದು ಮುಖ್ಯ.

- ಯಾವುದೇ ಮಕ್ಕಳಿಗೆ ತಲೆ ಅಥವಾ ಕಿವಿಯ ಮೇಲೆ ಹೊಡೆಯಬೇಡಿ. ಹಾಗೆ ಹೊಡೆಯುವುದು ಅಪಾಯವೆಂದು ಮಕ್ಕಳಿಗೂ ತಿಳಿಸಿ. ತಲೆಗೆ ಪೆಟ್ಟಾದರೂ ಕಿವುಡುತನ ಬರಬಹುದು.
- ಮಕ್ಕಳ ತಲೆಯ ಮೇಲೆ ಭಾರವಾದ ವಸ್ತುಗಳು ಬೀಳದಂತೆ ಎಚ್ಚರಿಕೆ ವಹಿಸಿ. ತಲೆಗೆ ಪೆಟ್ಟಾಗದಂತೆ ನೋಡಿಕೊಳ್ಳಿ.
- ಒಬ್ಬರ ಕಿವಿಯಲ್ಲಿ ಮತ್ತೊಬ್ಬರು ಜೋರಾಗಿ ಕಿರಿಚುವುದು ಅಪಾಯಕರವೆಂದು ಮಕ್ಕಳಿಗೆ ತಿಳಿ ಹೇಳಿ. ಜೋರಾದ ಶಬ್ದದಿಂದ ಕಿವುಡಾಗುವ ಸಂಭವವಿದೆ. ಜೋರಾಗಿ ಶಬ್ದ ಮಾಡುವ ಪಟಾಕಿಗಳು ಕಿವಿಗೆ ಅಪಾಯಕರ ಎಂದೂ ತಿಳಿಯಹೇಳಿ.
- ಕಿವುಡುತನವನ್ನುಂಟು ಮಾಡುವ ಯಾವುದೇ ಸೋಂಕು ರೋಗದಿಂದ ಗದ್ದಕಟ್ಟು, ಸಿಡುಬು ಇತ್ಯಾದಿ ನರಳುತ್ತಿರುವ ಮಕ್ಕಳು ವಾಸಿಯಾಗುವವರೆಗೂ ತರಗತಿಗೆ ಹಾಜರಾಗದಂತೆ ನೋಡಿಕೊಳ್ಳಿ. ಇತರ ಮಕ್ಕಳಿಗೆ ಸೋಂಕು ವಿರುದ್ಧ ಚುಚ್ಚುಮದ್ದು ಹಾಕಿಸಿಕೊಳ್ಳುವಂತೆ ಸೂಚಿಸಿ.
- ಯಾವುದೇ ವಿದ್ಯಾರ್ಥಿ ಹಲವಾರು ದಿನ ತರಗತಿಗೆ ಹಾಜರಾಗದಿದ್ದಲ್ಲಿ ಕಾರಣ ಏನು ಎಂಬುದನ್ನು ತಿಳಿದುಕೊಳ್ಳಿ. ಕಿವುಡುತನವನ್ನುಂಟು ಮಾಡುವ ಟೈಫಾಯಿಡ್, ಗದ್ದಕಟ್ಟು, ತೀವ್ರ ಜ್ವರ ಮುಂತಾದ ಯಾವುದೇ ರೋಗದಿಂದ ಆ ವಿದ್ಯಾರ್ಥಿ ನರಳುತ್ತಿದ್ದಲ್ಲಿ, ಶ್ರವಣಶಕ್ತಿಯ ಪರೀಕ್ಷೆ ಮಾಡಿಸುವುದು ಅವಶ್ಯಕ ಎಂಬುದನ್ನು ತಂದೆ ತಾಯಿಯರಿಗೆ ತಿಳಿಸಿ. ಮೇಲಿನ ರೋಗಗಳಿಂದ ಮಗುವಿನಲ್ಲಿ ಉಂಟಾಗಬಹುದಾದ ಶ್ರವಣ ಶಕ್ತಿಯ ತೊಂದರೆಯನ್ನು ಬೇಗನೆ ಗುರುತಿಸಿದಲ್ಲಿ, ಸೂಕ್ತ ಚಿಕಿತ್ಸೆ ಅಥವಾ ಇನ್ನಿತರ ಕ್ರಮ ಕೈಗೊಳ್ಳಲು ಸಹಾಯವಾಗುವುದು.
- ಮಕ್ಕಳಿಗೆ ವ್ಯಾಯಾಮ ಮಾಡಿಸುವಾಗ ಉಸಿರಾಡುವುದಕ್ಕೆ ಸಂಬಂಧಪಟ್ಟ ಕೆಲವು ಅಭ್ಯಾಸ ಕ್ರಮಗಳನ್ನು ರೂಢಿ ಮಾಡಿಸಿ. ಇದರಿಂದ ಉಸಿರಾಟದ ತೊಂದರೆಗಳನ್ನು ನಿವಾರಿಸಬಹುದು. ಅಂತೆಯೇ ಕೆಲ ಮಟ್ಟಿಗೆ ಶ್ರವಣ ಶಕ್ತಿಯ ತೊಂದರೆಗಳನ್ನು ತಡೆಗಟ್ಟಬಹುದು.
- ಮಕ್ಕಳು ಮಾತನ್ನು ಮತ್ತು ಸುತ್ತಲಿನ ಶಬ್ದಗಳನ್ನು ಆಲಿಸುವ ಅಭ್ಯಾಸ ಮಾಡಿಕೊಳ್ಳಲು ಪ್ರೋತ್ಸಾಹಿಸಿ. ಮಕ್ಕಳನ್ನು ಹೊರ ಸಂಚಾರಕ್ಕೆ ಕರೆದುಕೊಂಡು ಹೋದಾಗ ಅವರು ಮಾತನಾಡುವವರನ್ನು ನೋಡಿ ಮತ್ತು ಮಾತನ್ನು ಕೇಳಿ ಅರ್ಥಮಾಡಿಕೊಳ್ಳಲು ಪ್ರೋತ್ಸಾಹಿಸಿ.

## ನಮ್ಮ ಸಂಸ್ಥೆಯ ಜನಶಿಕ್ಷಣ ಸಾಹಿತ್ಯದ ಪ್ರಕಟಣೆಗಳು

| | |
|---|---|
| ■ ಶ್ರವಣನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ಕೈಪಿಡಿ | ರೂ. 10/- |
| ■ ಸೀಳು ತುಟಿ ಹಾಗೂ ಸೀಳು ಅಂಗಳು-ಪೋಷಕರಿಗೊಂದು ಕೈಪಿಡಿ | ರೂ. 10/- |
| ■ ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು -ಬಳಸುವವರ ಕೈಪಿಡಿ | ರೂ. 50/- |
| ■ ಶಾಲಾಪೂರ್ವ ತರಬೇತಿ ಕಾರ್ಯಕ್ರಮಗಳು | ರೂ. 10/- |
| ■ ಶ್ರವಣದೋಷ ತಡೆಗಟ್ಟುವಿಕೆಗೆ ಅನುಸರಿಸಬೇಕಾದ ಕ್ರಮಗಳು | ರೂ. 10/- |
| ■ ನಮ್ಮ ಮನೆಯಂಗಳದ ಹೂವು - ಸಚಿತ್ರ ಪುಸ್ತಕ | ರೂ. 15/- |
| ■ ಕಿವಿಮಾತು - ಕಿರುನಾಟಕ | ರೂ. 15/- |
| ■ ಸಫಲತೆಗಿದುವೆ ಸರಿದಾರಿ - ಬೀದಿನಾಟಕ | ರೂ. 15/- |
| ■ ಮೋನಿ ನಿಜಕೂ ಧೀರ - ಕಥನ ಗೀತೆ | ರೂ. 15/- |
| ■ ಪತ್ರ ಹೇಳಿದ ಕಥೆ - ಕಥನ ಪುಸ್ತಕ | ರೂ. 15/- |
| ■ ನಮ್ಮೊಳಗೊಬ್ಬರು - ಕಥನ ಪುಸ್ತಕ | ರೂ. 15/- |

| | |
|---|---|
| ■ **25 Golden Rules for Parents of Children with Hearing Impairment** | **Rs. 10/-** |
| ■ **Preschool Training Program for Children with Communication Disorders** | **Rs. 10/-** |
| ■ **Break the Barrier of Silence – Cochlear Implant** | **Rs. 25/-** |
| ■ **Things You Always Wanted to Know About Learning Disability** | **Rs. 25/-** |
| ■ **Toy Kit for Kids with Developmental Disabilities** | **Rs. 50/-** |

ಇದೀಗ ಲಭ್ಯವಿದೆ ! ಅಖಿಲ ಭಾರತ ವಾಕ್ ಶ್ರವಣ
ಸಂಸ್ಥೆಯು ನಿಮಗೆಂದೇ ಪ್ರಸ್ತುತಪಡಿಸಿರುವ ಧ್ವನಿಸುರುಳಿ
**“ಕಿವಿಮಾತು”**

# ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು

ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಇಂದು ದೇಶವು ಹೆಮ್ಮೆಪಡುವಂತಹ ಸಂಸ್ಥೆಯಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್-ಶ್ರವಣ ನ್ಯೂನತೆಯುಳ್ಳ ಜನರ ಸೇವೆಗೆ ಕಟಿಬದ್ಧವಾಗಿ ನಿಂತಿದೆ. ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ. ಸಂಸ್ಥೆಯ ಶಾಲಾಪೂರ್ವ ತರಬೇತಿ ಕೇಂದ್ರದಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆಯಲು ಅರ್ಹರನ್ನಾಗಿ ಮಾಡಲು ತರಬೇತಿ ನೀಡಲಾಗುತ್ತಿದೆ. ಸಂಸ್ಥಯಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳು 'ಅಂಗವಿಕಲರು' ಎನ್ನಿಸಿಕೊಳ್ಳುವುದಿಲ್ಲ. ಇಂತಹ ಮಕ್ಕಳನ್ನು 'ವಿಶೇಷ ಅರ್ಹತೆಯುಳ್ಳವರು' ಎಂದು ಪರಿಗಣಿಸಲಾಗುತ್ತದೆ. ಮಕ್ಕಳಲ್ಲಿರುವ ಈ 'ವಿಶೇಷ ಅರ್ಹತೆಗಳನ್ನು' ಬೆಳಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ನಮ್ಮ ಸಂಸ್ಥೆಯ ಮುಖ್ಯ ಆಶಯ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರ ಬಹಳ ಮುಖ್ಯ.




**ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ**
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006
ದೂರವಾಣಿ: 2514449, 2515410, 2515805 ಟೆಲಿಫ್ಯಾಕ್ಸ್: 2510515
ಇ-ಮೇಲ್:aiish_dir@yahoo.com ವೆಬ್‌ಸೈಟ್: www.aiishmysore.com